

ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ

# ಚೋಮನದುಡಿ ಮತ್ತು ಕುಸುಮಬಾಲೆ ಕಾದಂಬರಿಗಳಲ್ಲಿ ದಲಿತ ಸಂವೇದನೆ

ಮಾರ್ಗದರ್ಶಕರು
**ಡಾ. ಬಿ.ಯು. ಸುಮಾ**
ಕನ್ನಡ ಸ್ನಾತಕೋತ್ತರ ಕೇಂದ್ರ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ವಿಜಯನಗರ, ಬೆಂಗಳೂರು – 560040

ಸಂಶೋಧನಾ ವಿದ್ಯಾರ್ಥಿ :
**ಪ್ರಭಾಕರ. ಆರ್.**
ನೊಂದಣಿ ಸಂಖ್ಯೆ : KVMBKS-00685







ಕಾವ್ಯಮಂಡಲ, ಬೆಂಗಳೂರು

**2013–14**

## ಪ್ರಮಾಣೀಕರಣ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿರುವ **"ಚೋಮನದುಡಿ ಮತ್ತು ಕುಸುಮಬಾಲೆ ಕಾದಂಬರಿಗಳಲ್ಲಿ** ದಲಿತ ಸಂವೇದನೆ ಕೃತಿ ಎಂಬ ಶೀರ್ಷಿಕೆಯ ಈ ನಿಬಂಧವನ್ನು ಡಾ॥ ಬಿ.ಯು. ಸುಮಾ, ಸಹ ಪ್ರಾಧ್ಯಾಪಕರು, ಕನ್ನಡ ಸ್ನಾತಕೋತ್ತರ ಕೇಂದ್ರ, ಸರ್ಕಾರಿ ಪ್ರಥಮ ಕಾಲೇಜು, ವಿಜಯನಗರ, ಬೆಂಗಳೂರು – 560 040. ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರ ಉದ್ದೇಶಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ :

ಬೆಂಗಳೂರು

ಸಂಶೋಧನಾ ವಿದ್ಯಾರ್ಥಿ

## ದೃಢೀಕರಣ :

ಪ್ರಭಾಕರ ಆರ್. ಇವರು **"ಚೋಮನದುಡಿ ಮತ್ತು ಕುಸುಮಬಾಲೆ ಕಾದಂಬರಿಗಳಲ್ಲಿ ದಲಿತ ಸಂವೇದನೆ"** ಎಂಬ ಶೀರ್ಷಿಕೆಯ ಎಂ.ಫಿಲ್ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿರುವ ಈ ಸ್ವತಂತ್ರ ಅಧ್ಯಯನದ ನಿಬಂಧವನ್ನು ಈ ಮೊದಲು ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ :

ಬೆಂಗಳೂರು.

ಮಾರ್ಗದರ್ಶಕರು
**ಡಾ. ಬಿ.ಯು. ಸುಮಾ**
ಕನ್ನಡ ಸ್ನಾತಕೋತ್ತರ ಕೇಂದ್ರ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ವಿಜಯನಗರ, ಬೆಂಗಳೂರು – 560040

# ಪರಿವಿಡಿ

# ಅಧ್ಯಾಯ – 1

## ಅಧ್ಯಯನದ ಉದ್ದೇಶ,ವ್ಯಾಪ್ತಿ ಮತ್ತು ಸ್ವರೂಪ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾದಂಬರಿ ಪ್ರಕಾರವು ವಿಶಿಷ್ಟ ಸ್ಥಾನವನ್ನು ಪಡದುಕೊಂಡಿದೆ ಪಾಶ್ಚಾತ್ಯ ಸಾಹಿತ್ಯ ಪ್ರಕಾರದ ಪ್ರೇರಣೆಯಿಂದ ಬಂದುದ್ದಾದರೂ ನೆಲಮೂಲ ಸತ್ವವನ್ನು ಅಳವಡಿಸಿಕೊಂಡು ನಾಡು – ನುಡಿಯ ಸತ್ವವನ್ನು ನಾಡಿನ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ತತ್ವಗಳನ್ನು ಹೊಸಗನ್ನಡದ ಅರುಣೋದಯದ ಕಾಲದಿಂದ ಹಿಡಿದು ಇಂದಿನವರೆಗೆ ಹಲವಾರು ಸಾಹಿತ್ಯ ಘಟ್ಟಗಳಲ್ಲಿ ತನ್ನದೇ ಆದ ಸ್ವರೂಪವನ್ನು ಪಡೆಯುತ್ತಾ ಓದುಗರ ಗಮನ ಸೆಳೆಯುವಲ್ಲಿ ಯಶಸ್ವಿಯಾಗಿದೆ.

ನಮ್ಮ ನಾಡು ಹಲವಾರು ಭಾಷೆ, ಜಾತಿ, ಜನಾಂಗ, ವಿಭಿನ್ನ ಸಂಸ್ಕೃತಿ ಇತ್ಯಾದಿಗಳನ್ನೊಳಗೊಂಡಿದೆ. ಈ ರೀತಿಯ ಭಿನ್ನತೆಯೇ ಬಹುಶಃ ಮೇಲು–ಕೀಳು ಎಂಬ ಭಾವನೆ ಉಂಟಾಗಲು ಕಾರಣವಾಯಿತೋ ಏನೋ ಆದರೆ ಒಂದಂತೂ ಸತ್ಯ ಜಾತಿ ವ್ಯವಸ್ಥೆ ಏಣಿ–ಶ್ರೇಣಿಯನ್ನು ಕಡಿತಗೊಳಿಸುವ ಬದಲು ಮತ್ತಷ್ಟು ಭದ್ರಗೊಳಿಸುತ್ತಿದೆ ಎಂಬುದನ್ನು ನಾವು ಕಂಡುಕೊಂಡಿದ್ದೇವೆ.

ಬಹಳ ಹಿಂದೆ ಇದ್ದಂತಹ ವರ್ಣಾಶ್ರಮ ಧರ್ಮದ ಮೇಲುಕೀಳಿನ ಸ್ವರೂಪವು ಇಂದು ಜಾತಿಗಳಾಗಿ ವಿಭಜನೆಗೊಂಡು ಹಲವಾರು ರೀತಿಯ ಪಂಗಡಗಳನ್ನು ಸೃಷ್ಟಿ ಮಾಡಿದೆ. ಈ ಪಂಗಡಗಳಲ್ಲಿ ಮೇಲ್ವರ್ಗದ ಜನರಿಗೆ ಎಲ್ಲಾ ರೀತಿಯ ಸವಲತ್ತು ಸೌಲಭ್ಯಗಳು ಲಭ್ಯವಾಗುತ್ತಿದ್ದು ದಲಿತರಿಗೆ ಆಸ್ತಿ, ವಿದ್ಯೆ, ಅಧಿಕಾರವನ್ನು ನಿರಾಕರಿಸಿ ಅವರನ್ನು ಆರ್ಥಿಕವಾಗಿ, ಸಾಮಾಜಿಕವಾಗಿ ಅತ್ಯಂತ ನಿಕೃಷ್ಟವವಾಗಿ ಕಾಣಲಾಗುತ್ತಿದೆ. ಅಂದಿನಿಂದ ಇಂದಿನವರೆಗೂ ಮನುಧರ್ಮಶಾಸ್ತ್ರದ ಕಟ್ಟಳೆಗಳಿಗೆ ಒಳಗಾದ ದಲಿತರನ್ನು ದಮನ ಮಾಡುತ್ತಲೇ ಬಂದಿರುವ ಪುರೋಹಿತಶಾಹಿ ವರ್ಗ, ಜಮೀನ್ದಾರಿ ವ್ಯವಸ್ಥೆ ವಸಾಹತುಶಾಹಿ ವ್ಯವಸ್ಥೆ ಬಂಡವಾಳಶಾಹಿ ಅಧಿಕಾರಶಾಹಿ ವ್ಯವಸ್ಥೆಯು ಇಂದಿಗೂ ಅನೇಕ ವರ್ಷಗಳ ಹಿಂದೆ ಅಂಬೇಡ್ಕರ್ ಅವರು ತಮ್ಮ ಅಸ್ಪೃಶ್ಯರು ಎಂಬ ಕೃತಿಯಲ್ಲಿ ವರ್ಣಾಶ್ರಮ ವ್ಯವಸ್ಥೆಯಿಂದಾಗಿ ದೇಶದ ಮೂಲ ನಿವಾಸಿಗಳು ಸಮಾಜದ ಅಂಚಿಗೆ ತಳ್ಳಲ್ಪಟ್ಟರು ಆಸ್ತಿ, ವಿದ್ಯೆ, ಅಧಿಕಾರವನ್ನು ನಿರಾಕರಿಸಿದ್ದರಿಂದಲೇ ಆರ್ಥಿಕವಾಗಿ ಬಡವರಾದರು ಬಡವರಾಗಿದ್ದರಿಂದಲೇ ಇವರು ಗುಲಾಮಗಿರಿಗೆ ತಳಲ್ಪಟ್ಟರು ಎಂಬ ಮಾತನ್ನು ಒಪ್ಪಲೇ ಬೇಕಾದ ಕಟುಸತ್ಯವಾಗಿದೆ. ಅವರನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ಹವಣಿಸುತ್ತಿದ್ದಾರೆ.

ಈ ದೇಶದ "ಅಸ್ಪೃಶರು ವಿದ್ಯಾವಂತರಾಗುವುದನ್ನಾಗಲಿ ಅಥವಾ ಅವರು ಸ್ವಂತ ಜಮೀನನ್ನು ಹೊಂದುವುದನ್ನಾಗಲಿ ಜಾತಿಯ ಮೇಲ್ವರ್ಗದ ಜನರು ಎಂದಿಗೂ ಒಪ್ಪಲಾರರು ಅವರ ದೃಷ್ಟಿಯಲ್ಲಿ ಅದು ಕ್ಷಮ್ಯ ಅಪರಾದ. ಅಸ್ಪೃಶರ ಆರ್ಥಿಕ ಜೀವನದ ಸ್ವಾವಲಂಬನೆಗೆ ಮನುವಾದಿ ಹಿಂದುಗಳು ಹೊಂದಿರುವ ಭೂ ಒಡೆತನದ ಅಸ್ತಿತ್ವ ಅಲುಗಾಡತೊಡಗುತ್ತದೆ. ಹಾಗೆಯೇ ಅಸ್ಪೃಶರು ತಮ್ಮಿಂದಾದ ಸರ್ವಸ್ವವನ್ನು ಮನುವಾದಿ ಹಿಂದೂ ವ್ಯವಸ್ಥೆಯ ಜಮೀನ್ದಾರಿ ವ್ಯವಸ್ಥೆಯ ಸುಖ ಮತ್ತು ಆರ್ಥಿಕವಾಗಿ ಏಕ ಸ್ವಾಮ್ಯಕ್ಕಾಗಿ ತ್ಯಾಗ ಮಾಡಿದಕ್ಕಾಗಿ ಮೇಲ್ವರ್ಗದವರ ಸಲುವಾಗಿಯೇ ಅಸ್ಪೃಶರು ದುಡಿಯಬೇಕಿದೆ" ಎಂಬ ಅಂಬೇಡ್ಕರ್ ಮಾತಿನ ಹಿನ್ನಲೆಯು ಚೋಮನ ಕುಟುಂಬಕ್ಕೆ ಸಂಪೂರ್ಣವಾಗಿ ಅನ್ವಯಿಸುತ್ತದೆ. ಈ ದೃಷ್ಟಿಯಿಂದ ಇಂತಹ ಜಾತಿಯ ಸೂಕ್ಷ್ಮತೆಯ ಸ್ವರೂಪವನ್ನು ಜಮೀನ್ದಾರಿ ವ್ಯವಸ್ಥೆ ಸೃಷ್ಟಿಸಿದ ಗುಲಾಮಗಿರಿಯ ಬದುಕನ್ನು ಅಂಬೇಡ್ಕರ್‌ರವರ ಅಧ್ಯಯನದ ನೆಲೆಯಲ್ಲಿ ವಿಮರ್ಶಾತ್ಮಕವಾಗಿ ನೋಡುವ ಉದ್ದೇಶವನ್ನು ಹೊಂದಿದೆ.

ಎರಡು ವಿಭಿನ್ನ ಕಾಲಘಟ್ಟದಲ್ಲಿ ರಚನೆಯಾದ ಕೃತಿಗಳನ್ನು ಮುಖಾಮುಖಿಯಾಗಿಸುವುದರ ಮೂಲಕ ಸ್ವಾತಂತ್ರ್ಯ ಪೂರ್ವ ಬ್ರಾಹ್ಮಣಶಾಹಿ ಜಮೀನ್ದಾರಿ ವ್ಯವಸ್ಥೆಯ ಪ್ರಾಬಲ್ಯವಿರುವ ಪರಿಸರದ ಮತ್ತು ಸ್ವಾತಂತ್ರ್ಯೋತ್ತರ ದಲಿತ ಸಮುದಾಯಗಳ ಪರಿಸರದಲ್ಲಿರುವ ಜಾತಿವ್ಯವಸ್ಥೆ, ವರ್ಗವ್ಯವಸ್ಥೆಯ ವಿಭಿನ್ನ ಹೇಗೆ ಚಿತ್ರಿಸುತ್ತ ಹೋಗುತ್ತಾರೆ ಎಂಬುದನ್ನು ತಿಳಿಯುವ ಉದ್ದೇಶದಿಂದ ಈ ವಿಚಾರವನ್ನು ಮತ್ತಷ್ಟು ಪ್ರಜ್ಞಾಪೂರ್ವಕವಾಗಿ ವಿವರಿಸುವ ಪ್ರಯತ್ನ ಮಾಡಿರುತ್ತೇನೆ. ಜಾತಿ ವ್ಯವಸ್ಥೆಯ ಬದಲಾವಣೆಯ ತುಡಿತ ಮಿಡಿತಗಳು ಚರಿತ್ರೆಯ ನೆಲೆಯಲ್ಲಿ ಹೇಗೆ ಸ್ವೀಕರಿಸಲ್ಪಟ್ಟಿವೆ. ಅವು ಸಮಕಾಲೀನತೆಗೆ ಹೇಗೆ ಸ್ಪಂದಿಸುತ್ತವೆ ಎಂದು ತಿಳಿಯುವ ಉದ್ದೇಶವನ್ನು ಹೊಂದಿದೆ. ವರ್ಣ ವೃತ್ತಿ ಸಿದ್ದಾಂತಗಳು ದಲಿತರನ್ನು ಒಂದಿಸಿದ್ದವು ಬದಲಾದ ಕಾಲಘಟ್ಟಗಳಲ್ಲೂ ಅವು ಪರಿವರ್ತನೆಯೊಂದಿಗೆ ಹೇಗೆ ತಮ್ಮ ಅಸ್ತಿತ್ವವನ್ನು ಇನ್ನೂ ಸಹ ಉಳಿಸಿಕೊಂಡಿವೆ ಎಂಬುದನ್ನು ಅರಿಯುವುದು ಪ್ರಸ್ತುತ ಸಂದರ್ಭದಲ್ಲಿ ಸೂಕ್ತವೆಂದು ತೋರುತ್ತದೆ.

ಚೋಮನ ದುಡಿ ಮತ್ತು ಕುಸುಮಬಾಲೆ ಎರಡು ಕಾದಂಬರಿಯಲ್ಲಿ ಬಳಕೆಯಾಗಿರುವ ಭಾಷೆ ಕಥಾವಸ್ತು, ತಂತ್ರ ಮತ್ತು ಶೈಲಿ ಮುನ್ನೆಡೆಸಿಕೊಂಡು ಹೋಗುವ ಕ್ರಮ ವಿಭಿನ್ನವಾಗಿದೆ. ಪಾತ್ರಗಳಾಗಿ ಇತಿಹಾಸವನ್ನು, ಪುರಾಣವನ್ನು ಬಿಚ್ಚಿಡುವ ಜ್ಯೋತಮ್ಮಗಳ ಜಾನಪದೀಯ ನೆಲೆಗಟ್ಟನ್ನು ಕೃತಿಗಾರರು ಹೇಗೆ ಬಳಸಿದ್ದಾರೆ ಎಂಬುದನ್ನು ಅರಿಯುವ ಉದ್ದೇಶವನ್ನು ಹೊಂದಿದೆ.

ಇನ್ನು ಕೃತಿಕಾರರು ವ್ಯವಸ್ಥೆಯ ಪರವಾಗಿ ನಿಂತಂತೆ ಭಾಸವಾಗುವ ಕಾರಂತರ ವ್ಯಕ್ತಿತ್ವಕ್ಕೂ ಹಾಸವನ್ನೇ ಮುರಿದುಕಟ್ಟುವ ಕ್ರಮವನ್ನು ಅನುಸರಿಸಿದ ದೇವನೂರು ಮಹಾದೇವರ ದಲಿತ ಸಂವೇದನೆಯ ೂಪ ಇಂದು ಮತ್ತು ಮುಂದಿಗೆ ಹೇಗೆ ದಾಖಲೆಯನ್ನೊದಗಿಸುತ್ತದೆ ಎಂಬುದನ್ನು ವಸ್ತುನಿಷ್ಠವಾಗಿ ತಿಳಿಯುವ ದ್ದೇಶವನ್ನು ಹೊಂದಿದೆ. ಹತ್ತು ಹಲವು ರೀತಿಯಲ್ಲಿ ಅಭಿವೃದ್ಧಿ ಹೊಂದುವಸಲುವಾಗಿ ಬೇರೆ ಬೇರೆ ರೀತಿಯ ದಲಾವಣೆ ಬಯಸುತ್ತಿರುವ ಇಂದಿನ ದಿನಮಾನಗಳಲ್ಲಿ ಜಾತಿ ವ್ಯವಸ್ಥೆ ಮಾತ್ರ ಇನ್ನೂ ಹಾಗೆಯೇ ಉಳಿದು ಂದಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ನವೋದಯ, ನವ್ಯ, ಪ್ರಗತಿಶೀಲ, ಬಂಡಾಯ, ಸಾಹಿತ್ಯದ ನೆಲೆಗಟ್ಟನ್ನು ಹೊಂದಿದ್ದು ಅದನ್ನು ಮೀರಿಯೂ ಚಿತವಾಗಿ ಕಾಲಾತೀತವಾದ ರಚನಾ ಕ್ರಮದಲ್ಲಿ ತಮ್ಮ ಕೃತಿಗಳನ್ನು ಸೂಚಿಸಿರುವ ದಲಿತೀಯ ಮತ್ತು ಲಿತೇಯ ಕಾರಂತರು ಮತ್ತು ದೇವನೂರು ನೆಲೆಯಲ್ಲಿ ಅರಿಯುವ ದೃಷ್ಟಿಕೋನ ಹೊಂದಿದ್ದು, ಒಂದು ನುಭವಬರದೆ ಹೋದರೂ ಅನುಭವಿಸಿದವರ ಕಷ್ಟಕಾರ್ಪಣ್ಯ ಅಳವಡಿಸಿಕೊಂಡಿದ್ದೇನೆ.

ನನ್ನ ಸಂಶೋಧನೆಯು ಚೋಮನದುಡಿ ಮತ್ತು ಕುಸುಮಬಾಲೆಯಲ್ಲಿನ ದಲಿತ ಸಂವೇದನೆ ಎಂಬ ರ್ಷಿಕೆಯನ್ನೊಂದಿದ್ದು ಅಧ್ಯಯನದ ದೃಷ್ಟಿಯಿಂದಾಗಿ ಐದು ಅಧ್ಯಾಯನಗಳನ್ನಾಗಿ ಮಾಡಿಕೊಂಡಿರುತ್ತೇನೆ.

## ದಲಿತ ಸಂವೇಧನೆಯ ಸ್ವರೂಪ

ದಲಿತ ಸಂವೇದನೆ ಎಂದರೇನು? ದಲಿತರು ಎಂದರೆ ಯಾರು ? ದಲಿತತ್ವ ಎಂದರೇನು? ಯಾವುದು ದಲಿತ ಸಂವೇದನೆ ದಲಿತರು ಬರೆದದ್ದು ಮಾತ್ರವೇ ದಲಿತ ಸಂವೇದನೆಯೇ? ದಲಿತೇತರು ಬರೆದದ್ದು ದಲಿತ ಸಂವೇದನೆಯೇ? ದಲಿತನೊಬ್ಬ ದೇವರ ಬಗ್ಗೆ ಕುರಿತು ಬರೆದರೆ ದಲಿತ ಸಂವೇದನೆಯೇ ಎಂಬ ಪ್ರಶ್ನೆಗಳು ಸಹಜವಾಗಿ ಮೂಡುತ್ತವೆ. ಇದಕ್ಕೆ ಸಂಬಂಧಪಟ್ಟಂತೆ ಅನೇಕ ದಲಿತ ಚಿಂತಕರು ತಮ್ಮ ಹೇಳಿಕೆಯನ್ನು ನೀಡಿದ್ದಾರೆ. ದಲಿತರೇ ಬರೆದದ್ದು ಮಾತ್ರ ದಲಿತ ಸಾಹಿತ್ಯ ಎಂಬ ಸ್ಥೂಲ ನಿರ್ದಾರಕ್ಕೂ ಬಂದಾಗಿದೆ. ನಮ್ಮ ಸಮಾಜಿಕ ವ್ಯವಸ್ಥೆಯ ಕಟ್ಟುಪಾಡಿನ ಬೃಹತ್ ಹಂದರದಲ್ಲಿ ಪ್ರಜ್ಞಾವಂತ ದಲಿತನೊಬ್ಬ ಅನುಭವಿಸುವ ನೋವು, ಹಿಂಸೆ ಸಂಕಟ ಅವಮಾನಗಳನ್ನು ತನ್ನ ಅನುಭವದ ಮಸಿಯಲ್ಲಿ ಅದ್ದಿ ಬರೆದ ಸಾಹಿತ್ಯವೇ ದಲಿತ ಸಾಹಿತ್ಯವಾಗುವುದು. ದಲಿತ ಲೇಖಕನೊಬ್ಬ ದಲಿತರನ್ನು ಕುರಿತು ದಲಿತತ್ವದಿಂದ ಬರೆದದ್ದು ದಲಿತೀಯ ಸಾಹಿತ್ಯ.

ದಲಿತತ್ವದ ದಟ್ಟವಾದ ನೋವು ಸಹಾ ಕಾಣುವಂತಿರಬೇಕು ಅವನ ವ್ಯಕ್ತಿತ್ವ ಬದುಕಿನೊಡನೆ ಮುಖಾಮುಖಿಯಾದಾಗ ಉಂಟಾಗುವ ತಲ್ಲಣಗಳನ್ನು ಗುರುತಿಸುವಂತವನಾಗಬೇಕು ಕೊಳಕು ಅಸಹ್ಯಗಳ – ರೋಗ – ರುಜೀನಗಳ ನಡುವೆಯೂ ಸಣ್ಣಗೆ ಮಿರುಗುವ ನಗುವನ್ನು ಸೆರೆ ಹಿಡಿಯಬಲ್ಲವನಾಗಿರಬೇಕು. ಬದುಕು ಅವನಿಗೆ ನಕಾರಾತ್ಮಕವಲ್ಲ. ಅವ್ಯವಸ್ಥೆಯ ಒಳಗೂ ತನ್ನದೆ ಆದ ಒಂದು ವ್ಯವಸ್ಥೆಯಿದೆ ಎಂದು ಮನಗಾಣಬೇಕು. ಊಟ, ನಿದ್ರೆ, ವಸತಿ ಯಂತಹ ಸಮಸ್ಯೆಗಳು ಕಾಡಿ ವೈಭವದ ಪರಿಕರಗಳಿಂದ ಹೊರತಾಗಿರಬೇಕೆಂಬ ಅಭಿಪ್ರಾಯವನ್ನು ತಾಳುತ್ತಾರೆ ವಿದ್ವಾಂಸರು ಅಂತೆಯೇ ಈ ಕಾದಂಬರಿಗಳಲ್ಲಿ ದೇವನೂರು ಮಹಾದೇವರು ದಲಿತ ಸಂವೇದನೆಯನ್ನು ಉಳ್ಳವರಾಗಿ ಕಂಡು ಬಂದರೆ ಶಿವರಾಮ ಕಾರಂತರ ಯಾವ ದಲಿತ ಸಂವೇದನೆಯನ್ನು ಕ್ಷಣ ಕಾಲವು ಅನುಭವಿಸದೆ ಇದ್ದದ್ದರಿಂದ ಅದರ ಬಿಸಿ ಅವರನ್ನೂ ತಟ್ಟದಿದ್ದರೂ ತಮ್ಮ ಸೂಕ್ಷ್ಮ ಗ್ರಹಿಕೆಯ ನೆಲೆಯಿಂದ ಈ ದಲಿತ ಚಿಂತನೆಯನ್ನು ಕಂಡವರಾಗಿದ್ದಾರೆ. ಆದ್ದರಿಂದಲೇ ಚೋಮ ಹಿಂದೂ ಉಳಿಗದ ಅಧೀನದಲ್ಲೇ ಪ್ರಾಣ ಬಿಡುತ್ತಾನೆ ಎಂದು ಬಾಸವಾಗುತ್ತದೆ.

## ಚೋಮನದುಡಿ ಮತ್ತು ಕುಸುಮಬಾಲೆ ಕಾದಂಬರಿಯಲ್ಲಿನ ಜಾತಿ ವ್ಯವಸ್ಥೆ

ಹಿಂದೂಧರ್ಮದ ಸ್ವರೂಪವು ಭಾರತೀಯ ಜಾತಿ ವ್ಯವಸ್ಥೆಯ ರಚನ ಕ್ರಮದಲ್ಲಿದೆ. ಆದ್ದರಿಂದ ಹಿಂದೂದೇಶದಲ್ಲಿ ಜನಿಸಿದ ಯಾರೇ ಆಗಲಿ ಅವನು ಒಂದು ಜಾತಿಗೆ ಸೇರಿದವನಾಗಿರುತ್ತಾನೆ. ಹಿಂದೂ ಧರ್ಮದಲ್ಲಿ ಹುಟ್ಟುವುದೆಂದರೆ ಬ್ರಾಹ್ಮಣನಾಗಿಯೋ? ವೈಶ್ಯನಾಗಿಯೋ? ಕ್ಷತ್ರಿಯನಾಗಿಯೋ? ಶೂದ್ರನಾಗಿಯೋ? ಅಥವಾ ಸಂಪೂರ್ಣವಾಗಿ ಸಮಾಜದ ಎಲ್ಲೆಯ ಹೊರಗೆ ನಿಲ್ಲುವ ಅವರ್ಣನಾಗಿಯೋ ಹುಟ್ಟುವುದೇ ಆಗಿದೆ. ಭಾರತದ ಜಾತಿವ್ಯವಸ್ಥೆಯ ಹುಟ್ಟಿನ ಬಗ್ಗೆ ನಿಖರವಾಗಿ ಹೇಳಲಾಗದಿದ್ದರೂ ವೇದಗಳ ಕಾಲದಿಂದಲೂ ಇದ್ದ ವರ್ಣ ವ್ಯವಸ್ಥೆಯಿಂದಾಗಿ ಜಾತಿ ವ್ಯವಸ್ಥೆಹುಟ್ಟಿಕೊಂಡಿದೆ ಎಂಬುದು ವಿದ್ವಂಸರ ಅಭಿಪ್ರಾಯವಾಗಿದೆ.

'ಬ್ರಾಹ್ಮಣೋಸ್ಯ ಮುಖಮಾಸೀತ್ ಬಾಹುರಾಜನ್ಯಃಶೃತಃ
ಊರೊ ತದಸ್ಯಯದ್ ವೈಶ್ಯಃಪದ್ಭಾಗಂ ಶೂದ್ರೋ ಅಜಾಯತ'

ಬ್ರಹ್ಮನ ಮುಖದಿಂದ ಬ್ರಾಹ್ಮಣ ತೋಳುಗಳಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯ ಮತ್ತು ಪಾದಗಳಿಂದ ಶೂದ್ರರು ಜನಿಸಿದರು ಎಂಬ ಯಜುರ್ವೇದದ ಸಾಲುಗಳು ವರ್ಣವ್ಯವಸ್ಥೆಯ ರಚನೆಯನ್ನು ಹೇಳುತ್ತವೆ. ಅಲ್ಲದೆ ಭಗವದ್ಗೀತೆಯಲ್ಲಿ ಚಾತುರ್ವರ್ಣ್ಯಂಮಯಾ ಸೃಷ್ಟಂ ಹೇಳಿಕೆಯು ಭಾರತೀಯ ವೈದಿಕ ಜನಸಮುದಾಯವನ್ನು ಅವರ ಗುಣ ಕರ್ಮಗಳ ಆಧಾರದ ಮೇಲೆ ನಾಲ್ಕು ವರ್ಣಗಳಾಗಿ ವಿಂಗಡಿಸಲಾಗಿದೆ ಎಂದು ತಿಳಿಸಲಾಗಿದೆ. ತೈತ್ತೇರಿಯ ಬ್ರಾಹ್ಮಣವು ಕೂಡ ಸೃಷ್ಟಿಕರ್ತನ ನಾಲ್ಕು ಅಂಗಗಳಿಂದ ನಾಲ್ಕು ವರ್ಣಗಳನ್ನು ಸೂಚಿಸುತ್ತದೆ. ಬ್ರಾಹ್ಮಣನಿಂದ ಪೂಜೆ, ಪುರೋಹಿತಿಕೆ, ಕ್ಷತ್ರಿಯನಿಂದ ರಾಜತ್ವ ರಕ್ಷಣೆ, ವೈಶ್ಯರಿಂದ ವ್ಯಾಪಾರ (ತೆರಿಗೆ ವಸೂಲು ಮಾಡುವುದು) ಶೂದ್ರನಿಂದ ಮೇಲಿನ ಮೂರು ವರ್ಗದ ಜನರ ಸೇವೆ ಮಾಡುವುದು ಎಂಬ ಕಟ್ಟಳೆಗಳನ್ನು ವಿಧಿಸಿ ನಡೆದುಕೊಂಡುಬಂದಿದೆ. ವೃತ್ತಿ ಕರ್ಮಗಳ ಆಧಾರದ ಮೇಲೆ ತಲೆ ಎತ್ತಿದ ವರ್ಣಗಳು ಮುಂದೆ ಮೇಲು-ಕೀಳಿನ ಭಾವನೆಯನ್ನುಂಟು ಮಾಡಿದೆ. ವೃತ್ತಿಗಳು ವರ್ಣಗಳನ್ನು ಪ್ರತಿನಿಧಿಸಿದ್ದರಿಂದ ವೃತ್ತಿ-ವರ್ಣ-ಜಾತಿಗಳು ಒಂದರೊಳಗೊಂದು ಬೆಸೆದುಕೊಂಡಿವೆ. ಈ ಧೋರಣೆಯಿಂದಾಗಿ ಸಾಮಾಜಿಕ, ಆರ್ಥಿಕ ವ್ಯಕ್ತಿತ್ವಗಳು ಪೂರ್ವ ನಿರ್ಧಾರಿತವೆಂಬಂತೆ ಹಿಂದೂ ಧರ್ಮದ ಕರ್ಮಸಿದ್ಧಾಂತ, ದೈವಸಿದ್ಧಾಂತ ಪುನರ್ಜನ್ಮ ಸಿದ್ಧಾಂತಗಳು ಈ ಜಾತಿ ವ್ಯವಸ್ಥೆಗೆ ಪುಷ್ಟಿಕೊಡುತ್ತವೆ.

'ಶೂದ್ರ ಹುಟ್ಟನ್ನು ಕುರಿತು ಅಪಸ್ಥಾಂಭ ಧರ್ಮ ಸೂತ್ರವು' ವರ್ಣ ವ್ಯವಸ್ಥೆಯಲ್ಲಿ ನಾಲ್ಕು ಜಾತಿಗಳಿವೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ವರ್ಣಗಳನ್ನು ಜಾತಿಗಳಾಗಿ ಬದಲಾಯಿಸಿದೆ.

ಜಾನ್‌ವಿಲ್ಸನ್ ಎಂಬ ಸಮಾಜ ಶಾಸ್ತ್ರಜ್ಞರು ತಮ್ಮ Indian Caste ಎಂಬ ಸಂಶೋಧನಾ ಗ್ರಂಥದಲ್ಲಿ 'ಹೊರಗಿನಿಂದ ಬಂದ ಆರ್ಯರು ಭಾರತದ ಮೂಲನಿವಾಸಿಗಳಾದ ದ್ರಾವಿಡರು ಮತ್ತು ಬುಡಕಟ್ಟು ಜನಾಂಗಗಳ ಮಾನವೀಯ ಎಲ್ಲಾ ಹಕ್ಕು ಬಾಧ್ಯತೆಗಳನ್ನು ನಷ್ಟಮಾಡಿ ಮತ್ಸರ ಹಾಗೂ ದುರಾಭಿಮಾನದಿಂದ ಹೀನ ಸ್ಥಿತಿಯಲ್ಲಿಡಲು ಧಾರ್ಮಿಕ ಶಾಸನಗಳ ಹೆಸರಿನಲ್ಲಿ ಘನಿಕರಿಸಿದ ಘೋರ ಕಟ್ಟಳೆಗಳನ್ನು ಚಾತುವರ್ಣ ಜಾತಿ ಪದ್ಧತಿಯನ್ನಾಗಿ ಮಾಡಿದ್ದಾರೆ' ಎಂಬ ಮಾತು ವಸ್ತುತಃ ಸತ್ಯವಾಗಿದೆ. ಡಾ. ಬಿ.ಆರ್. ಅಂಬೇಡ್ಕರ್‌ರವರು ಸಹ ಭಾರತಕ್ಕೆ ಹೊರಗಿನಿಂದ ಬಂದ ವಿದೇಶಿಯರು ದಮನಮಾಡಿದ ಈ ದೇಶದ ಮೂಲನಿವಾಸಿ ಜನರೇ ಅಸ್ಪೃಶ್ಯರೆಂದು, ಅವರನ್ನು ಗೆದ್ದವರು ತಮ್ಮ ಕಾವಲುಗಾರರನ್ನಾಗಿ ಮಾಡಿಕೊಂಡುದ್ದರ ಪರಿಣಾಮವೇ ಅಸ್ಪೃಶ್ಯತೆಗೆ ಕಾರಣ ಎಂದು ಅಭಿಪ್ರಾಯ ಪಡುತ್ತಾರೆ. 'ಮಹಾಭಾರತದ ಶ್ಲೋಕದಲ್ಲಿನ ಭಾರದ್ವಜ ಮುನಿಯ ವರ್ಣ ಸಂಕರದಿಂದಾಗಿ ಜಾತಿ ಹುಟ್ಟಿಕೊಂಡಿತ್ತೆಂದು ಗೌತಮಮುನಿ ಮತ್ತು ಮನು ವಿವಿಧ ವರ್ಣಗಳ ನಡುವೆ ನಡೆಯುವ ವಿವಾಹದಿಂದಾಗಿ ಜಾತಿ – ಉಪಜಾತಿ ನಿರ್ಮಾಣವಾದುವೆಂದು ವರ್ಣಸಂಕರವೇ ಜಾತಿ ಪದ್ಧತಿಯ ಉಗಮಕ್ಕೆ ಕಾರಣ ಎನ್ನುತ್ತಾರೆ.

ಅಸ್ಪೃಶ್ಯರು, ದ್ರಾವಿಡರು ಬರುವುದಕ್ಕೂ ಮೊದಲು ಭಾರತದಲ್ಲಿದ್ದರೆಂದು ಗುಡ್ಡಗಾಡು ಜನಾಂಗವಾಗಿ ಉಳಿದಿದ್ದರೆಂದು, ದ್ರಾವಿಡರು ಬಂದ ನಂತರ ದ್ರಾವಿಡರಿಂದ, ವ್ಯವಸಾಯದಿಂದ ದೂರವೇ ಉಳಿದಿದ್ದರೆಂದು ಊಹಿಸಬೇಕಷ್ಟು ಎನ್ನುತ್ತಾ ಆರ್ಯರು ಬಂದ ನಂತರ ಸುಸಂಸ್ಕೃತರಾದ ದ್ರಾವೀಡರೋಡನೆ ಘರ್ಷಣೆ ಹಾಗೂ ಕಲಿಯುವುದು ಅನಿವಾರ್ಯವಾಯಿತು. ಆದರೆ ಗುಡ್ಡಗಾಡು ಜೀವಿಗಳಾದ ಮೂಲನಿವಾಸಿಗಳು ಪ್ರತ್ಯೇಕವಾಗಿ ಅಸ್ಪೃಶ್ಯರಾಗಿಯೇ ಉಳಿದರು ಎಂಬ ವಿದ್ವಾಂಸರ ಅಭಿಪ್ರಾಯ. ಅಸ್ಪೃಶ್ಯರು ಈ ದೇಶದ ಮೂಲನಿವಾಸಿಗಳಾಗಿದ್ದಾರೆ ಎನ್ನುವುದನ್ನು ಹೇಳುತ್ತಾರೆ. ಅಂಬೇಡ್ಕರ್‌ರವರು ಬ್ರಾಹ್ಮಣಶಾಹಿಯ ಮೂಲವನ್ನು ಆರ್ಯರು ಖೈಬರ್ ಮತ್ತು ಬೋಲಾನ್ ಕಣಿವೆಯ ಮೂಲಕ ಮಧ್ಯ ಏಷ್ಯಾದಿಂದ ಭಾರತಕ್ಕೆ ದನ ಮೇಯಿಸಿಕೊಂಡು ಬಂದು ಇಲ್ಲಿದ್ದ ನೈಸರ್ಗಿಕ ಸಂಪತ್ತನ್ನು ನೋಡಿ ತಮ್ಮ ಪಶುಸಾಕಾಣಿಕೆಗೆ ಸೂಕ್ತ ಸ್ಥಳವೆಂದು ಭಾವಿಸಿ ನೆಲೆನಿಂತರು. ನಂತರ ಆರ್ಯ – ದ್ರಾವಿಡರ ನಡುವೆ ಘರ್ಷಣೆ ಉಂಟಾಗಿ ದ್ರಾವಿಡರನ್ನು ಸೋಲಿಸಿದರು. ಸೋತವರನ್ನು ತಮ್ಮ ಸೇವಕರನ್ನಾಗಿ ಮಾಡಿಕೊಂಡು ಇವರ ಮೇಲೆ ಸಾಮಾಜಿಕ, ಆರ್ಥಿಕ, ರಾಜಕೀಯ ಪ್ರಭುತ್ವವನ್ನು ಸ್ಥಾಪಿಸಿದರು.

ಆಸ್ತಿ ವಿದ್ಯೆ, ಆಯುಧ ಅಧಿಕಾರವನ್ನು ನಿರಾಕರಿಸಿ ಸಮಾಜದ ಅಂಚಿಗೆ ದೂಡಿ ಅವರನ್ನು ಗುಲಾಮರನ್ನಾಗಿ ಮಾಡಿದರು ಎಂಬುದನ್ನು ಚಾರಿತ್ರಿಕ ದಾಖಲೆಗಳೊಂದಿಗೆ ತೆರೆದು ತೋರಿಸುತ್ತಾರೆ. ಅದೇ ಮನೆ ಇದ್ದರು ಅಸ್ಪೃಶ್ಯರು ಮೂಲ ನಿವಾಸಿಗಳಾಗಿದ್ದು ಜಾತಿ ವ್ಯವಸ್ಥೆಯ ಕಾರಣದಿಂದಾಗಿ ಆರ್ಥಿಕವಾಗಿ ಬಡವರಾಗಿ ಗುಲಾಮಗಿರಿಗೆ ಒಳಗಾಗಿದ್ದರೆಂದು ಅವರು ಸಾಮಾಜಿಕ ಶೋಷಣೆಗೆ ಗುರಿಯಾಗಿರುವುದನ್ನು ತಿಳಿಸುತ್ತದೆ. ಸಾಹಿತ್ಯವು ಸಮಾಜದ ಪ್ರತಿಬಿಂಬ, ಸಾಹಿತ್ಯವು ಸಮಕಾಲೀನ ಸಮಾಜದ ರತ್ನಗನ್ನಡಿಯಾಗಿದ್ದು ಸಮಾಜ ಮತ್ತು ಸಾಹಿತ್ಯ ಸುಮಧುರ ಸಂಬಂಧವನ್ನೊಂದಿದೆ. ಕಲೆ, ಸಾಹಿತ್ಯ, ಸಾಮಾಜಿಕ ಜೀವನಕ್ಕೂ ಯಾವರೀತಿಯ ಸಂಬಂಧವಿದೆ ಎಂಬುದು ಇವತ್ತಿನ ಸಾಹಿತ್ಯದ ತನಕವೂ ಒಂದು ಚರ್ಚಾಸ್ಪದ ವಿಷಯವೆನಿಸಿದೆ. ಕಲೆಯು ಸಮಾಜಕ್ಕಾಗಿ ಎಂಬುದು ಒಂದು. ಆದರೆ ಕಲೆ ಮಾನವ ಪ್ರಜ್ಞೆಯ ವಿಕಾಸಕ್ಕೆ ಸಾಮಾಜಿಕ ಪ್ರಜ್ಞೆಯ ಸುಧಾರಣೆಗೆ ನೆರವಾಗಬೇಕೆಂಬ ಸದಾಶಯವನ್ನೊಂದಿದೆ.

ಸಾಹಿತ್ಯವನ್ನು ನಿರ್ಮಿಸುವವರು ಸಮಾಜದ ವಿವಿಧ ಧರ್ಮ, ಜಾತಿ ಭಾಗಗಳಿಂದ ವರ್ಣಗಳಿಂದ ಬಂದ ಬುದ್ಧಿಜೀವಿ ಕವಿಗಳು ಸಾಮಾಜಿಕ, ಆರ್ಥಿಕ ವ್ಯವಸ್ಥೆ ಉತ್ಪಾಧನೆ ಸಾಮಾಜಿಕ ನಂಬಿಕೆ. ಬದುಕಿನ ವೈಶಮ್ಯ, ರಾಜಕೀಯ, ಸಾಂಸ್ಕೃತಿಕ ಆಚರಣೆಗಳು ತನ್ನ ಸಮಾಜದ ಸುತ್ತಮುತ್ತಲಿನ ಪರಿಸರ ಪರಿಸ್ಥಿತಿಗಳ ಚಿತ್ರಣವನ್ನು ಸಾಹಿತ್ಯವು ಒಳಗೊಂಡಿರುತ್ತದೆ. ದಿನನಿತ್ಯ ನಡೆಯಬಹುದಾದ ವ್ಯವಹಾರಗಳ, ಘಟನೆಗಳ ಬಗ್ಗೆ ಕವಿ ಚಿಂತಕ ಚಿಂತಿಸತೊಡಗುತ್ತಾನೆ. ಬಹಿರಂಗದ ಬದುಕು ಅಂತರಂಗವನ್ನು ಪ್ರವೇಶಿಸಿ ಅಂತರಂಗ ಅಭಿವ್ಯಕ್ತಿಯ ಸಾಹಿತ್ಯವಾಗಿ ಹೊರಹೊಮ್ಮುತ್ತದೆ. ಹೀಗೆ ದಲಿತರ ಬದುಕಿನ ಬಗ್ಗೆ ಜಾತಿ ವ್ಯವಸ್ಥೆಯ ಬಗ್ಗೆ ಸಮಕಾಲೀನ ಸಾಹಿತ್ಯ ಕೃತಿಗಳು ಅದರ ಚಿತ್ರಣವನ್ನು ವಿವರಿಸುತ್ತವೆ. ಕವಿರಾಜಮಾರ್ಗಕಾರ ಪಂಪ, ನಾಗವರ್ಮ, ದುರ್ಗಸಿಂಹ, ನಯಸೇನ, ಜನ್ನ ಮೊದಲಾದ ಕವಿಗಳು ಬಸವಣ್ಣ, ಅಲ್ಲಮಪ್ರಭು, ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ ಮುಂತಾದ ವಚನಕಾರ, ಹರಿಹರ ರಾಘವಾಂಕರು, ಕನಕನಂತಹ ಕೀರ್ತನಾಕಾರರು ದಲಿತ ಅಸ್ಪೃಶ್ಯ, ಹೊಲೆಯ, ಮಾದಿಗರ ಬಗ್ಗೆ ತಮ್ಮ ನಿಲುವನ್ನು ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಕನ್ನಡದ ಸಾಮಾಜಿಕ ಕಾದಂಬರಿಗಳಲ್ಲಿ ಸುಧಾರಣಾವಾದಿ ಪ್ರಭಾವ ಕಂಡುಬರುತ್ತದೆ. ಧಾರ್ಮಿಕ ಮೂಡನಂಬಿಕೆಗಳ ಖಂಡನೆ. ಸಾಂಸ್ಕೃತಿಕ ಭ್ರಷ್ಟಾಚಾರಗಳ ಟೀಕೆ ಉದಾರವಾದಿ, ಮಾನವತವಾದಿ ಮೌಲ್ಯಗಳ ಪುರಸ್ಕಾರ ಕಂಡುಬರುತ್ತದೆ. ಆದರ್ಶಗಳಿಗೆ ಭದ್ರವಾದ ವಾಸ್ತವಿಕ ನೆಲೆಗಟ್ಟು ಇಲ್ಲದಿದ್ದರು ಆಧುನಿಕ ಮೌಲ್ಯಗಳ ಸಂಪರ್ಕದೊಂದಿಗೆ ಚಲನಾಶೀಲ ಸಮಾಜವೊಂದನ್ನು ಕಾಣುತ್ತವೆ ಎಂಬ ಅಶೋಕರವರ ಮಾತನ್ನೂ ವಾಸ್ತವದ ನೆಲೆಯಲ್ಲಿ ಅರಿಯಬಹುದಾಗಿದೆ.

ಆ ಕಾಲದ ಅಂದರೆ ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ ಸಾಮಾಜಿಕ ವ್ಯವಸ್ಥೆಗೂ, ಸ್ವಾತಂತ್ರ್ಯೋತ್ತರ ಕಾಲಘಟ್ಟದ ಸಾಮಾಜಿಕ ವ್ಯವಸ್ಥೆಗೂ ಅಷ್ಟೇನು ವ್ಯತ್ಯಾಸ ಕಂಡುಬರುವುದಿಲ್ಲ. ಆದರೆ ಆರ್ಥಿಕ, ರಾಜಕೀಯ ವಲಯಗಳಲ್ಲಿ ಆಗಾದ ಪರಿಣಾಮವನ್ನುಂಟುಮಾಡಿದೆ. ಕಾರಂತರ ಚೋಮನದುಡಿ ಕಾದಂಬರಿಯು ದಲಿತರ ಸಮಸ್ಯೆಯನ್ನು ಮುಖ್ಯವಾಗಿರಿಸಿಕೊಂಡು ರಚಿಸಿದ ಕನ್ನಡದ ಮೊದಲ ಕಾದಂಬರಿಯಾಗಿದೆ. ಇಂತಹ ಸಮಸ್ಯೆಯನ್ನು ಮುಖ್ಯವಾಗಿರಿಸಿಕೊಂಡ ಹೇಮಾವತಿ, ಭಾರತೀಪುರ, ಒಂದು ಊರಿನ ಕಥೆ, ಮಲೆಗಳಲ್ಲಿ ಮದುಮಗಳು, ಕಾರ್ಯ, ಮಾಗಿ ನೀ ನನ್ನ ಮುಟ್ಟಬೇಡ, ಒಡಲಾಳ, ಕುಸುಮಬಾಲೆ, ಮಾದನಮಗಳು, ದಾಟು ಇತ್ಯಾದಿಗಳು ರಚಿತವಾಗಿದ್ದರು ಅವುಗಳ ದೃಷ್ಠಿಕೋನ ಅಲ್ಲಿ ಚಿತ್ರಿಸಿರುವ ದಲಿತ ಸ್ವರೂಪಗಳು ಬೇರೆ ಬೇರೆಯಾಗಿವೆ. ನನ್ನ ಅಧ್ಯಯನ ದೃಷ್ಟಿಯಿಂದ ಸ್ವಾತಂತ್ರಪೂರ್ವದಲ್ಲಿನ ಚೋಮನ ದುಡಿ ಮತ್ತು ಸ್ವಾತಂತ್ರ್ಯೋತ್ತರವಾಗಿ ಕುಸುಮ ಬಾಲೆ ಈ ಎರಡು ವಿಭಿನ್ನ ವ್ಯಕ್ತಿತ್ವಗಳ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡಿಕೊಂಡಿದ್ದೇನೆ.

ಕಾದಂಬರಿಕಾರರ ಬಗ್ಗೆ ಹೇಳುವುದಾದರೆ ಕಾರಂತರು ದಕ್ಷಿಣ ಕನ್ನಡ ಜಿಲ್ಲೆಯ ಘಟ್ಟದ ಪ್ರದೇಶದಿಂದ ಬಂದವರಾಗಿದ್ದು ಅವರು ಹುಟ್ಟಿ ಬೆಳೆದ ಪರಿಸರ ನೈಸರ್ಗಿಕವಾಗಿ, ಸಾಮಾಜಿಕ, ಆರ್ಥಿಕ, ರಾಜಕೀಯ, ಸಂಸ್ಕೃತಿಯ ದೃಷ್ಟಿಯಿಂದ ತನ್ನದೆ ವಿಶಿಷ್ಟತೆಯನ್ನು ಉಳಿಸಿಕೊಂಡುಬಂದಿದೆ. ಅತಿ ಹೆಚ್ಚು ಬ್ರಾಹ್ಮಣ ಸಮುದಾಯದವರೇ ಇರುವ ಪರಿಸರ ಕೆಳಜಾತಿಗಳ ಸಂಖ್ಯೆ ಕಡಿಮೆ ಇದೆ. ಇಲ್ಲಿನ ದಲಿತರು ಬ್ರಾಹ್ಮಣಶಾಹಿ ಮತ್ತು ಜಮೀನ್ದಾರಿ ಶಾಹಿಯ ಪ್ರಭುತ್ವದಿಂದ ಕೂಡಿದ್ದು ದಲಿತರು ಹಣೆಬರಹವೆಂಬಂತೆ ಶೋಷಣೆಗೆ ಒಳಗಾಗಿ ಯಾವ ಬದಲಾವಣೆಯ ಆಶಯವನ್ನು ಬಯಸದೇ ಜಾತಿ ಶೋಷಣೆಯನೆಲೆಯಲ್ಲಿ ಕಮರಿಹೋಗಿದ್ದಾರೆ. ಮತ್ತೊಬ್ಬ ಕಾದಂಬರಿಕಾರ ದೇವನೂರು ಮಹಾದೇವರವರು ಮೈಸೂರು ಪ್ರಾಂತ್ಯದ ನಂಜನಗೂಡು ಪ್ರದೇಶದ ಬಯಲುಸೀಮೆ ಪ್ರದೇಶಕ್ಕೆ ಸೇರಿದವರಾಗಿದ್ದಾರೆ. ಇಲ್ಲಿ ದಲಿತ ಸಮುದಾಯದ ಜನಗಳು ಬಹುಸಂಖ್ಯಾತರಾಗಿದ್ದರು. ಪುರೋಹಿತಶಾಹಿ ವ್ಯವಸ್ಥೆ ಸೃಷ್ಟಿಸಿದ ವರ್ಣಾಶ್ರಮ ವ್ಯವಸ್ಥೆಯಿಂದಾಗಿ ದಲಿತರು ಶೋಷಣೆ ಒಳಗಾಗಿರುವುದು ಈ ಭಾರತೀಯ ಸಾಮಾಜಿಕ ವ್ಯವಸ್ಥೆಯುಳ್ಳ ಎಲ್ಲಾ ಪ್ರದೇಶಗಳಲ್ಲೂ ಕಂಡು ಬರುತ್ತದೆ ಅದು ಇಲ್ಲಿಯೂ ಇದೆ. ಕಾರಂತರು ಬ್ರಾಹ್ಮಣ ಸಮುದಾಯದವರಾಗಿದ್ದು ಅವರು ಯಾವ ನೋವು ಶೋಷಣೆಯನ್ನು ಅನುಭವಿಸದೆ ತನ್ನ ಕವಿ ಮನಸ್ಸಿನಿಂದ ದಲಿತರ ಬದುಕನ್ನು ಸೂಕ್ಷ್ಮವಾಗಿ ಗ್ರಹಿಸಿ ಅವರ ಸ್ಥಿತಿಗತಿಗಳನ್ನು ತನ್ನ ಕೃತಿಯ ಮೂಲಕ ವ್ಯಕ್ತಪಡಿಸಿದ್ದು ನಿಜಕ್ಕೂ ಶ್ಲಾಘನೀಯವಾದುದು.

ಅಸ್ಪೃಶ್ಯ ಎಂಬ ಶಬ್ದವನ್ನು ಉಚ್ಚಾರಣೆ ಮಾಡುವುದೇ ಪಾಪಕರವಾದದ್ದು ಎಂದು ಹೇಳುವ ಸಮುದಾಯದ ಪ್ರತಿನಿಧಿಯೊಬ್ಬ ದಲಿತರ ಬಗ್ಗೆ ಚಿಂತಿಸಿರುವುದರ ಮೂಲಕ ಇವರು ವ್ಯಕ್ತಿತ್ವವನ್ನು ಘನಿಕರಿಸಿಕೊಂಡಿದ್ದಾರೆ ಎನ್ನಬಹುದು ಆದರೂ ಇದನ್ನೂ ದಲಿತೇಯ ಎಂದು ಭಾವಿಸಬಹುದು "ದಲಿತ ಸಂವೇಧನೆಯನ್ನು ಅನುಭವಿಸದೇ ದಲಿತ ಸಮುದಾಯದ ಬಗ್ಗೆ ಬರೆದ ಸಾಹಿತ್ಯ ದಲಿತೇಯ ಸಾಹಿತ್ಯ ಎನ್ನಿಸಿಕೊಳ್ಳುತ್ತದೆ. ಪ್ರಗತಿಪರರಾದ ಕಾರಂತರು ಬರೆದದನ್ನು ಈ ದೃಷ್ಠಿಕೋನದಿಂದ ನೋಡಬಹುದಾಗಿದೆ. ಆದರೆ ದೇವನೂರು ಮಹಾದೇವರು ದಲಿತ ಸಮುದಾಯದಲ್ಲಿ ಹುಟ್ಟಿ ದಲಿತರ ನೋವು, ಶೋಷಣೆ, ಬಡತನ, ಬಹಿಷ್ಕಾರ, ತಿರಸ್ಕಾರಕ್ಕೆ ಒಳಗಾದ ಸಮುದಾಯವನ್ನು ಕಂಡು ಆ ವೇದನೆ ಅನುಭವಿಸಿದವರಾಗಿದ್ದು ಅನುಭವದ ಚಿತ್ರಣವನ್ನು ಇವರ ಬರವಣಿಗೆಯಲ್ಲಿ ಕೂಡಿರುತ್ತದೆ. ದಲಿತರು ದಲಿತ ಪ್ರಜ್ಞೆಯಿಂದ ದಲಿತ್ವತದ ಕುರಿತು ಸಾಹಿತ್ಯ ದಲಿತೀಯ ಸಾಹಿತ್ಯವಾಗುತ್ತದೆ.

ಕಾದಂಬರಿ ರಚನೆಯ ಸಂದರ್ಭವು ಸಹ ಬೇರೆ ಬೇರೆಯಾಗಿಯೇ ವೈರುದ್ಯದ ನೆಲೆಯಲ್ಲಿ ಕಂಡುಬರುತ್ತದೆ. ಕಾರಂತರ ಚೋಮನ ದುಡಿ ಕಾದಂಬರಿಯು 1933ರ ಸಂದರ್ಭದಲ್ಲಿ ರಚಿತವಾದುದಾಗಿದೆ. ಈ ಕಾಲಘಟ್ಟ ಭಾರತೀಯ ಸಂದರ್ಭದಲ್ಲಿ ವಿಶಿಷ್ಟವಾಗಿದೆ. ಭಾರತದಾದ್ಯಂತ ಗಾಂಧೀ ನೇತೃತ್ವದಲ್ಲಿ ಸ್ವಾತಂತ್ರ್ಯ ಚಳುವಳಿಯು ನಡೆಯುತ್ತಿದ್ದರು ಅಂತಹ ಯಾವುದೇ ಸಂದರ್ಭ ಚೋಮನ ದುಡಿಯ್ಯಲಿ ವ್ಯಕ್ತವಾಗುವುದಿಲ್ಲ. ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯ ನಡೆಯುತ್ತಿದ್ದರು ಭಾರತದಾದ್ಯಂತ ಪುರೋಹಿತಶಾಹಿ, ಜಮೀನ್ದಾರ ಪ್ರಭುತ್ವ ವಸಾಹತುಶಾಹಿ ಪ್ರಭುತ್ವ ದಲಿತರನ್ನು ಗುಲಾಮರನ್ನಾಗಿ ನಡೆಸಿಕೊಳ್ಳುವುದು ರೂಡಿಯಲ್ಲಿತ್ತು. ಈಗಲೂ ಅದು ನಶಿಸಿ ಹೋಗಿಲ್ಲ. ಇಂತಹ ಜಮೀನ್ದಾರಶಾಹಿಯ ದಬ್ಬಾಳಿಕೆಯನ್ನು ಸಮಕಾಲೀನ ಸಂದರ್ಭದ ಕೃತಿಗಳಾದ ಕಾನೂನು ಹೆಗ್ಗಡತಿ ಮಲೆಗಳಲ್ಲಿ ಮದುಮಗಳು ಕೃತಿಗಳು ಅಂದಿನ ದಲಿತರ ಚಿತ್ರಣವನ್ನು ಚಿತ್ರಿಸುತ್ತವೆ. ಅಲ್ಲದೆ ವಸಾಹತುಶಾಹಿ ಬ್ರಿಟಿಷರ ವಿರುದ್ದ ಚಳುವಳಿ ನಡೆಯುತ್ತಿದ್ದ ಒಂದೆಡೆ ದಲಿತರಿಗೆ ಶಿಕ್ಷಣಕೊಡುವ ಅವರ ಸ್ವಾವಲಂಬನೆಗೆ ಸಹಕಾರಿಯಾಗುವ ಸಂದರ್ಭವನ್ನು ಕಾಣಬಹುದು. ಆದ್ದರಿಂದ ಚೋಮ ಯಾರೋ ದಲಿತ ಒಬ್ಬ ಉಳುಮೆ ಮಾಡುತ್ತಿದ್ದಾನೆ ಎಂಬ ಮಾತುಕೇಳಿ ಸಂಕಪ್ಪಯ್ಯನವರ ಮೂಲದವನಾದರೂ ಪಾದ್ರಿಯನ್ನು ಸಂದಿಸಲು ರೈತನೊಡನೆ ಪಾದ್ರಿಯ ಬಳಿ ಹೋದಾಗ 'ಗೇಣಿಗೆ ಕೊಡಬಹುದಾದ ಗದ್ದೆಗಳಿವೆ ಬರೆ ಗದ್ದೆಗಳಲ್ಲ ಬಹಳ ಒಳ್ಳೆಯ ಗದ್ದೆಗಳೇ ಇವೆ. ನಿಮ್ಮ ಹಳ್ಳಿಗೆ ಸಮೀಪದಲ್ಲೆ ಇವೆ. ಅವೆಲ್ಲ ಇಗರ್ಜಿಯ ಆಸ್ತಿ. ನಮ್ಮ ಜಾತಿಯವರಿಗೆ ಅಲ್ಲದೆ ಇತರರಿಗೆ ಕೊಡಲಿಕ್ಕೆ ಬಾರದು ಚೋಮ ನೀನು ಹಾಳಾದ ಅವರಿವರ ಚಾಕರಿ ಮಾಡಿಕೊಂಡಿರುವ ಬದಲು ಕ್ರಿಶ್ಚಿಯನನ್ನಾಗಿ ಸ್ವತಂತ್ರವಾಗಬಾರದೇ?' ಎಂಬ ಆಸೆ – ಆಮೀಷಗಳ ಮೂಲಕ ದಲಿತರನ್ನು ಕ್ರೈಸ್ತಧರ್ಮಕ್ಕೆ ಮತಾಂತರ ಮಾಡುತ್ತಿದ್ದರು. ಅಲ್ಲದೆ ಮೇಲ್ವರ್ಗದವರು ಇದಕ್ಕೆ ಹೊರತಾಗಿಲ್ಲ ಎಂದು.

ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯ ದೇವಯ್ಯ ಅಥವಾ ದೇವೇಗೌಡನ ಬೀಸೆಕಲ್ಲು ಸವಾರಿ ಪ್ರಸಂಗವನ್ನು ಕಾಣಬಹುದು. ಈ ಸಂದರ್ಭ ಕರ್ನಾಟಕಕ್ಕೆ ನವನಾಗರೀಕತೆಯನ್ನು, ಯಂತ್ರನಾಗರೀಕತೆಯನ್ನು ಅಳವಡಿಸಿಕೊಳ್ಳುವ ಸೂಚಕವಾಗಿ ಬೀಸೆಕಲ್ಲು ಕಂಡುಬರುತ್ತದೆ. ಬ್ರಿಟೀಷರೇ ಭಾರತದ ನವನಾಗರೀಕತೆ ಆಧುನೀಕರಣದ ನಿರ್ಮಾತೃಗಳು ಎಂಬಂತೆ ಕುವೆಂಪುರವರು ಚಿತ್ರಿಸಿ ಮತ ಪ್ರಚಾರಕ್ಕೆ ಬೈಸಿಕಲ್ಲನ್ನು ಬಳಸುತ್ತಾ ಬೈಬಲ್‌ಗಿಂತ ಹೆಚ್ಚು ಪ್ರಭಾವಶಾಲಿ ಎಂದು ಹೇಳುತ್ತಾರೆ. ಈ ಬೈಸಿಕಲ್ಲು ಓಡಾಡುವ ಜಾಗದಲ್ಲಿ ಮತಾಂತರ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತದೆ ಎಂಬುದನ್ನು ಸೂಚಿಸುತ್ತದೆ. ಅಲ್ಲದೆ ದಲಿತರ ಹಕ್ಕೋತ್ತಾಯಗಳಿಗಾಗಿ ಬಾಬಾ ಸಾಹೇಬ್ ಡಾ.ಅಂಬೇಡ್ಕರ್‌ರವರ ಹೋರಾಟವು ಶುರುವಾಗಿದ್ದು ಕಾಲಕಂ ದೇವಾಲಯ ಪ್ರವೇಶ ಮಹತ್‌ಕರೆಯ ಪ್ರಸಂಗ, ಭಾರತೀಯ ದಲಿತರಲ್ಲಿ ಜಾಗೃತಿಯನ್ನು ಉಂಟುಮಾಡಿತ್ತು. 1930–32ರ ಪೂನಾ ಒಡಂಬಡಿಕೆಯಿಂದಾಗಿ ದಲಿತರ ಹಕ್ಕುಗಳನ್ನು ಕಿತ್ತುಕೊಳ್ಳುವ ಗಾಂಧೀಜಿಯವರ ಕುತಂತ್ರವನ್ನು ಅಂಬೇಡ್ಕರ್ ಅರಿತ ಅನಿವಾರ್ಯ ಕಾರಣದಿಂದಾಗಿ ಪೂನ ಒಡಂಬಡಿಕೆಗೆ ಸಹಿ ಮಾಡಿದರು. ಬ್ರಿಟೀಷರಿಗೆ ದಲಿತರಿಗೂ ಇತರೆ ಹಿಂದೂಗಳಿಗೂ ಇರುವ ವ್ಯತ್ಯಾಸವನ್ನು ತಿಳಿಸಿ ಪ್ರತ್ಯೇಕ ಹಕ್ಕು ಪಡೆಯುವ ಹಂಬಲ ಬಾಬಾ ಸಾಹೇಬರದಾಗಿತ್ತು.

ಇದರಿಂದಾಗಿ ಗಾಂಧಿಜಿಯರವರು ಹರಿಜನೋದ್ಧಾರ ನಾಟಕವಾಡುತ್ತಾ ಹಿಂದೂ ವರ್ಣಾಶ್ರಮ ವ್ಯವಸ್ಥೆಗೆ ಒತ್ತು ನೀಡಿದರು. ಇದರಿಂದಾಗಿ ಬಾಬಾ ಸಾಹೇಬರು ತಮ್ಮ ಮತಾಂತರದ ಬಗ್ಗೆ '1935ರ ಅಕ್ಟೋಬರ್ 13ರಂದು ಯವೋಲದ ಅಸ್ಪೃಶ್ಯರ ಸಮ್ಮೇಳನದಲ್ಲಿ ಪ್ರಸ್ತಾಪಿಸುತ್ತಿದ್ದ ಕಾಲಘಟ್ಟ ದಲಿತರ ಏಳಿಗೆ, ದಲಿತ ಸಾಹಿತ್ಯ ಹುಟ್ಟುತ್ತಿದ್ದ ಕಾಲ, ದಲಿತರು ಸ್ವಾವಲಂಬನೆಗೆ ಸಂಘಟಿತರಾಗುವಂತಹ ಕಾಲಘಟ್ಟ. ಪ್ರಪಂಚದ ಎರಡನೇ ಮಹಾಯುದ್ದಗಳ ನಡುವಿನ ಸಂದರ್ಭವದು. ಇದೆಲ್ಲವನ್ನೂ ಅರಿತಿದ್ದ ಕಾರಂತರು ದೇಶದ ಹಾಗೂ – ಹೋಗುಗಳನ್ನು ಅರಿತಿದ್ದ ಕಾರಂತರ ಚೋಮನನ್ನು ಜಾತಿ ವ್ಯವಸ್ಥೆಯಲ್ಲಿ ಜಮೀನ್ದಾರಿ ಅಡಿಯಾಳಾಗಿ ಮತಾಂತರಹೊಂದದೆ ಪಂಜುರ್ಲಿ ಭೂತದ ಮರೆಯಲ್ಲಿ ನಿಂತು 'ಚೋಮ ಮೀಸೆ ಮಣ್ಣಾಗುವತನಕ ತನ್ನನ್ನು ನಂಬಿ ಬಂದು ಈಗ ಸಾಯುವ ಮೂರು ದಿನಕ್ಕೆ ಮುಂಚೆ ನನ್ನನ್ನು ಬಿಟ್ಟು ಪಾದ್ರಿಯ ಹಿಂದೆ ಓಡುತ್ತಿಯೋ?' ಎನ್ನುವ ಮಾತುಗಳು ಗಾಂಧೀಜಿಯವರು ಅಂಬೇಡ್ಕರರಿಂದ ಜಾತಿ ವ್ಯವಸ್ಥೆಯ ನಾಶವಾಗುವ ಸಂದರ್ಭದಲ್ಲಿ ಪೂನಾ ಒಡಂಬಡಿಕೆಯ ಮೂಲಕ ಅಸ್ಪೃಶ್ಯರು ಹಿಂದೂಗಳೇ ಆಗಿದ್ದು ಹಿಂದೂ ಧರ್ಮ ಒಡೆದು ಓಳಾಗುತ್ತದೆ ಎಂಬ ಕುತಂತ್ರದಿಂದ ಅದೇ ಜಾತಿ ಪದ್ದತಿ ಇಂದಿಗೂ ಮುಂದುವರೆಯುವಂತಾಗಿದೆ.

ಅದರಂತೆ ಕಾರಂತರು ಚೋಮನ ಬದಲಾವಣೆಗೆ ಒತ್ತು ನೀಡದಿರುವುದು ಗಾಂಧಿ ದಾರಿ ಡಿದಿರುವುದೇನೋ ಎಂದು ಬಾಸವಾಗುತ್ತದೆ. ಆದರೆ ದಲಿತರ ವಸ್ತು ವಿಷಯವನ್ನು ಕೇಂದ್ರಿಕೃತವಾಗಿರಿಸಿಕೊಂಡು ಚಿಸಿದ್ದು ಮಾತ್ರ ಒಪ್ಪುವಂತದಾಗಿದೆ. ಆದರೆ ದೇವನೂರು ಮಹಾದೇವರು ಕುಸುಮಬಾಲೆ ಪ್ರಕಟವಾಗಿದ್ದು 988 ಈ ವೇಳೆಗಾಗಲೇ ಭಾರತದಾದ್ಯಂತ ಹಲವಾರು ಬದಲಾವಣೆಗಳಾಗಿದ್ದವು. 1947ರಲ್ಲಿ ಸ್ವಾತಂತ್ರ್ಯ ಂದಾಗಿತ್ತು. (ದಲಿತರಿಗೆ ಇನ್ನೂ ಬಂದಿಲ್ಲ), 1950ರಲ್ಲಿ ಅಂಬೇಡ್ಕರ್‌ರವರು ಸಂವಿಧಾವನ್ನು ರಚಿಸಿಯಾಗಿತ್ತು. ೋರಾಟದ ಹಲವು ಘಟ್ಟಗಳನ್ನು ದಾಟಿ ಪ್ರಭುದ್ದತೆ ಮೆರೆದು ಬೌದ್ಧಧರ್ಮಕ್ಕೆ ಮತಾಂತರವು ಆಗಿ ರಿನಿರ್ವಾಣಹೊಂದಿದ್ದರು. 1972ರಲ್ಲಿ ದಲಿತ ಸಾಹಿತ್ಯ ಒಂದು ರೂಪವನ್ನು ಪಡೆದು ಈ ಸಮಾಜವನ್ನು ಚ್ಚರಿಸಿ ತನ್ನದೇ ಆದ ಭಾಷೆಯಲ್ಲಿ ಹಾಡು ಭಾಷೆಯಲ್ಲಿ ಸಾಹಿತ್ಯವನ್ನು ಸೃಜಿಸಿ ತಮ್ಮ ಸಿಟ್ಟು, ಆಕ್ರೋಶ, ೇಧನೆ, ನೋವು, ತಿರಸ್ಕಾರ, ಅವಮಾನ, ಬಡತನದ ಎಲ್ಲವನ್ನೂ ಹೊರಹಾಕಲಾಗಿತ್ತು. ಲೋಹಿಯವಾದ ಮಾರ್ಕ್ಸ್‌ವಾದ ಪ್ರೇರಣೆಯಿಂದ ಸಿದ್ದಲಿಂಗಯ್ಯ, ಅರವಿಂದಮಾಲಗತ್ತಿ, ದೇವನೂರ ಮಹಾದೇವ, ಮ.ನ.ಜವರಯ್ಯ, ಿ.ಕೃಷ್ಣಪ್ಪ ಇತ್ಯಾದಿ ಅನೇಕರು ದಲಿತ ಚಳುವಳಿಯನ್ನು ರೂಪಿಸಿ ಅದರೊಟ್ಟಿಗೆ ದಲಿತ ಸಾಹಿತ್ಯ ಚಳುವಳಿಯನ್ನು ೆಳೆಸಿದ್ದು. 1984ರ ವೇಳೆಗೆ ದಲಿತ ಸಂಘರ್ಷ ಸಮಿತಿ ಘನ ಅಸ್ತಿತ್ವವನ್ನು ಪಡೆದಿತ್ತು. 1986ರ ಭೂ ಸುಧಾರಣೆ ಕಾಯ್ದೆಯು ಜಾರಿಗೆ ಬಂದಿತ್ತು. ಇವೆಲ್ಲವುಗಳ ಒಟ್ಟಾರೆ ಪ್ರತಿಭಟನೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಳುವಳಿಗೆ ನಾಂದಿ ಹಾಡಿದರು. 'ದಲಿತರು ಸಾಮಾಜಿಕ ಘನತೆಯನ್ನು ಪಡೆದುಕೊಳ್ಳಲು ಅಸ್ಪೃಶ್ಯತೆಯ ೋಂಕನ್ನು ತೊಲಗಿಸಲು ಸ್ವಾವಲಂಬಿ ಜೀವನವನ್ನು ನಡೆಸಲು, ದುಡಿತಕ್ಕೆ ತಕ್ಕ ವೇತನ ಪಡೆಯಲು ದಲಿತ ೆಣ್ಣುಗಳ ಮೇಲೆ ನಡೆಯುವ ಬಲತ್ಕಾರಗಳಿಗಾಗಿ ಗುಡಿಸಲುಗಳಿಗೆ ಬೆಂಕಿ ಹಾಕಿದ್ದಕ್ಕಾಗಿ ಇಂತಹ ಹಲವಾರು ಅಂಶಗಳಿಗೆ ಒತ್ತುಕೊಟ್ಟು ಹೋರಾಡಿರುವುದು ಕಂಡುಬರುತ್ತದೆ.

ಆದರೆ ಈ ಹೋರಾಟಗಳು ಆರ್ಥಿಕ ಮಟ್ಟಕ್ಕೆ ಏರಲೇ ಇಲ್ಲ' ಇಂತಹ ಹೋರಾಟದ ಅಂಶಗಳು ಸಾಂಸ್ಕೃತಿಕ ಮತ್ತು ಸಾಹಿತ್ಯ ವಸ್ತುವಾಗಿ ಬಳಕೆಯಾಗಿವೆ. ಅಂತರ್ಜಾತಿ ವಿವಾಹ ಮೌಢ್ಯದ ಮೂಡ ನಂಬಿಕೆಯ ವಿರುದ್ಧ ಹೋರಾಟ ದೇವರುಗಳ ನಿರಾಕರಣೆಯಂತಹ ಅನೇಕ ವಿಷಯಗಳನ್ನು ಡಾ.ಅಂಬೇಡ್ಕರ್, ಕಾರ್ಲ್‌ಮಾರ್ಕ್ಸ್, ಲೋಹಿಯಾ ಹೀಗೆ ಬೇರೆ ಬೇರೆ ಅನುಯಾಯಿಗಳು ಚರ್ಚಿಸಿ ರಾಜಕೀಯ ಸಮಸ್ಯೆಗಳು ಎದುರಾದಾಗ ಯಾವುದೇ ತಾರ್ಕಿಕ ನೆಲೆಯಲ್ಲಿ ಸಮರ್ಥಿಸಿಕೊಳ್ಳದೆ ಇಂದಿಗೂ ವಿವಿಧ ಪಕ್ಷಗಳಾಗಿ ದಲಿತರು ಚಮಚಗಳಾಗಿ ಕೆಲಸ ನಿರ್ವಹಿಸುತ್ತ ದಲಿತರ ಹಕ್ಕೋತ್ತಾಯಗಳಿಗೆ ಮುಂದಾಗದೇ ಇರುವುದು ದುರಂತವೆನಿಸುತ್ತದೆ.

ಈ ಎಲ್ಲದರ ಪ್ರಭಾವ ಪ್ರೇರಣೆಯಿಂದಾಗಿ ಕುಸುಮಬಾಲೆಯಲ್ಲಿ ಎಲ್ಲಾ ಪಾತ್ರಗಳು ಮಾತನಾಡುತ್ತವೆ. ಚನ್ನ – ಕುಸುಮ, ಯಾಡನ ತಾಯಿ ಅಕ್ಕಮಹಾದೇವಮ್ಮ – ಜೀತಗಾರ ಮಲ್ಲಾಜಮ್ಮ ಹುಟ್ಟಿದ ಹಿನ್ನಲೆಯಲ್ಲಿನ ವರ್ಣ ಸಂಕರಗಳು ಭಗವತಿ–ಅಮಾಸರ ಕಲ್ಪನೆಗಳು ಧಾರಾಳವಾಗಿ ಕಂಡುಬರುತ್ತವೆ. ಇದಕ್ಕೆ ಪೂರಕವೆಂಬಂತೆ ಸಿದ್ದಲಿಂಗಯ್ಯನವರ ಉತ್ತರ 'ದಿಕ್ಕಿನ ರಾಣಿ' ಕಥೆಯು ಪುಷ್ಠಿಯನ್ನೊದಿಗಿಸುತ್ತದೆ. ಈ ಪದ್ಧತಿಯು ಪ್ರಾಚೀನಕಾಲದಿಂದಲೂ ಅಂದರೆ ವರ್ಣಸಂಕರ ವೇದಗಳ ಕಾಲದಿಂದಲು ಚಾಲ್ತಿಯಲ್ಲಿವೆ ಎಂಬುದನ್ನು ಮಹಾಭಾರತದ ಶಾಂತಿಪರ್ವದಲ್ಲಿ ಉಲ್ಲೇಖಿಸಲಾಗಿದೆ. ಭಾರದ್ವಜ ಮುನಿಯು " ಈ ಮೊದಲಿದ್ದ ಚತುವರ್ಣ ವ್ಯವಸ್ಥೆಯೂ ಅವರವರ ವರ್ಣ ವಿಶೇಷದಿಂದ ಬೇಧಿಸಿ ತಿಳಿಯಲ್ಪಡುತ್ತಿತ್ತು. ಆದರೆ ಈಗ ಸರ್ವರಲ್ಲಿಯೂ ವಿವಿಧ ವರ್ಣಗಳು ಕಾಣುವುದರಿಂದ ವರ್ಣ ಸಂಕರವಾದದ್ದು ನಿಜ. ವರ್ಣ ಸಂಕರ ಎಂದರೆ ರಕ್ತ ಮಿಶ್ರಣ ಇದು ಎಲ್ಲಾ ಜಾತಿಗಳಲ್ಲಲೂ ಆಗಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಯಾವುದೇ ಜಾತಿ ಪರಿಶುದ್ಧವಾಗಿ ಉಳಿದಿಲ್ಲ ಎಂಬುದನ್ನು ಹಿಂದೂಗಳ ಪಂಚಮವೇದದ ಮಹಾಭಾರತದ ಸಿದ್ದಾಂತದಲ್ಲಿ ವ್ಯಕ್ತವಾಗಿದೆ'. ಹೀಗೆ ಆದಿಕಾಲದಿಂದಲು ಇರುವ ವರ್ಣಸಂಕರ 1950ರ ತನಕ ಒಳಗೊಳಗೆ ಗೌಪ್ಯವಾಗಿದ್ದು ಹೊರಬರುತ್ತಿರಲಿಲ್ಲ. ಮೇಲ್ವರ್ಗದ ಸಾಹಿತಿಗಳು ಜಾತಿ, ವರ್ಣಗಳ ದೃಷ್ಟಿಯಿಂದ "ಮೇಲ್ವರ್ಗದ ಪುರುಷರ" ದಬ್ಬಾಳಿಕೆಯನ್ನು ಮತ್ತು ವಿಷಯಲಂಪಟನವನ್ನು ಹೆಮ್ಮೆ ಎಂಬಂತೆ ಚಿತ್ರಿಸಿದ್ದಾರೆ. ದಲಿತ ಪುರುಷರನ್ನು ಬಯಸಿ ಕೂಡಿದ ಮೇಲ್ವರ್ಗದ ಸ್ತ್ರೀಯರ ಬಗ್ಗೆ ಎಲ್ಲೂ ಪ್ರಸ್ತಾಪ ಕಂಡುಬರುವುದಿಲ್ಲ. ಯಾಕೆಂದರೆ ಈ ವಿಷಯ ಹೊರಬಿದ್ದಾಗ 'ಚನ್ನ–ಕುಸುಮರ ಸಂಬಂಧಗಳು ಜರುಗಿದ್ದಾಗ ಚನ್ನನನ್ನು ಗೌಪ್ಯವಾಗಿ ಕೊಲೆ ಮಾಡುತ್ತಾರೆಯೇ ವಿನಃ ಕುಸುಮಳಂತಹ ಮೇಲ್ವರ್ಗದ ಹೆಣ್ಣಿಗೆ ಸಾವಿರುವುದಿಲ್ಲ.

ಚೋಮನ ದುಡಿಯ ಬೆಳ್ಳಿಯೂ ಅವಳು ದಲಿತಳಾಗಿ ಮಾನ–ಮಾರ್ಯಾದೆಗೆ ಅಂಜಿ ಬಾಳಿದರು ವ್ಯವಸ್ಥೆಯ ಪಿತೂರಿಯಿಂದಾಗಿ ಮನ್ವೇಲ ಮಿಂಗೇಲರ ಕಾಮಕ್ಕೆ ಬಲಿಯಾಗುತ್ತಾಳೆ. ಇಲ್ಲಿ ಪುರೋಹಿತ ಶಾಹಿ ಜೊತೆಗೆ ವಸಾಹತು ಶಾಹಿಯು ದಲಿತರ ಶೋಷಣೆಯನ್ನು ಮಾಡಿರುವುದನ್ನು ವಿವರಿಸುತ್ತದೆ. 'ವಸಾಹತು ಶಾಹಿ ಬ್ರಿಟೀಷರ ಕಾಲದಿಂದ ಹಿಡಿದು ಇಂದಿನವರೆಗೂ ನಡೆದು ಬಂದಿರುವ ಮನುವಾದಿಗಳ ಕುಪ್ರಸಿದ್ದ ರಾಜಕೀಯ ತಂತ್ರವೆಂದರೆ ಅಸ್ಪೃಶ್ಯರು ಮತ್ತು ಹಿಂದುಳಿದ ವರ್ಗಗಳ ನಿತ್ಯನೋವು ಮತ್ತು ಯಾತನೆಗಳ ಮೇಲೆ ನಡೆದಿರುವ ಹಿಂದೂ ರಾಷ್ಟ್ರದ ದೂರ್ತ ರಾಜಕೀಯ' ಎಂದು ಮ.ನ. ಜವರಯ್ಯರವರ ಅಭಿಪ್ರಾಯ ಸರಿಯಾಗಿದೆ. ಮೇಲ್ವರ್ಗದ ಹೆಣ್ಣಿನೊಡನೆ ಕೆಳಜಾತಿಯ ಪುರುಷರೊಂದಿಗಿನ ಸಂಬಂಧಗಳು ಜಗಜಾಹೀರಾದಾಗ ಮರ್ಯಾದ ಹತ್ಯೆಯಂತಹ ಘಟನೆಗಳು ನಡೆಯುತ್ತವೆ ಇಂದಿಗೂ ನಡೆಯುತ್ತಲಿವೆ. ಇಂತಹ ಒಂದು ಸಮಾಜದ ಕರಾಳ ಮುಖವನ್ನು ಬಯಲುಗೊಳಿಸುವ ದೇವನೂರರ ತಂತ್ರ ಮೆಚ್ಚುವಂತಹದಾಗಿದೆ.

ಕಾರಂತರ ಚೋಮ ಜಾತಿಯನ್ನು ಬಿಟ್ಟು ಹೊರಬರಲಾರ ಅವನ ಕುಟುಂಬದ ಒಟ್ಟಾರೆ ಶ್ರಮದ ಫಲವನ್ನು ಸಂಕಪ್ಪಯ್ಯ ದಣಿಗಳು ಉಣ್ಣುತ್ತಿದ್ದಾರೆ. ಚೋಮನ ಒಂದೇ ಒಂದು ಮಹಾದಾಸೆ ಭೂಮಿಯನ್ನು ಗೇಣಿ ಪಡೆದಾದರೂ ವ್ಯವಸಾಯ ಮಾಡಬೇಕೆಂಬ ಸ್ವಾವಲಂಬನೆ ಸ್ವಾತಂತ್ರ್ಯ ಬದುಕನ್ನು ಕಟ್ಟಿಕೊಳ್ಳಬಯಸುತ್ತದೆ. ಅಸ್ಪೃಶ್ಯ ಜಾತಿಗೆ ಸೇರಿದವನೊಬ್ಬನಿಗೆ ಭೂಮಿಯ ಒಡೆತನದ ಆಸೆ ಹುಟ್ಟಿದ್ದೂ ಅದರಿಂದ ಉಲ್ಬಣಗೊಂಡ ಪ್ರಶ್ನೆಗಳು ಭಾರತೀಯ ಜಾತಿ ವ್ಯವಸ್ಥೆಯ ಸಂದರ್ಭದಲ್ಲಿ ಪರಂಪರಾಗತವಾಗಿ ಬಂದ ಮೌಲ್ಯಗಳಿಗೆ ಮುಖಾಮುಖಿಯಾಗಿಸುತ್ತದೆ. ಇದಕ್ಕೆ ಸಂಬಂಧಿಸಿದಂತೆ ಬಾಬಾ ಸಾಹೇಬ್ ಅಂಬೇಡ್ಕರ್‌ರವರು ಕಿ.ಪೂ. 185ರಲ್ಲಿ ರಚನೆಯಾದ ಮನುಸ್ಮೃತಿಯು ಹೇಳಿರುವ ಆಸ್ತಿ, ವಿದ್ಯೆ, ಆಯುಧಗಳನ್ನು ನಿರಾಕರಿಸಿದರು. ಅಲ್ಲದೆ ಆಸ್ತಿ–ಪಾಸ್ತಿ ಅಥವಾ ಧನ ಗಳಿಸುವ ಸಾಮರ್ಥ್ಯವಿದ್ದರೂ ಶೂದ್ರನು ಸಂಪತ್ತು ಸಂಗ್ರಹಿಸಬಾರದು. ಯಾಕೆಂದರೆ ಅದು ಮುಂದೆ ಬ್ರಾಹ್ಮಣರ ಪೀಡಿಗೆಗೆ ಪ್ರೇರಣೆಯಾಗುವುದು ಎಂದು (ಮನು 10/126) ಈ ಹೇಳಿಕೆಯನ್ನು ಗುರ್ತಿಸುತ್ತಾರೆ. ಚೋಮ ಗೇಣಿ ಮಾಡಲು ರಟ್ಟೆಯಲ್ಲಿ ಬಲವಿದೆ. ಕಾಡಿನಲ್ಲಿ ಸಿಕ್ಕಿರುವ ಎತ್ತುಗಳಿವೆ. ಅವನ ಮನದಲ್ಲಿ ಛಲವಿದೆ. ಆದ್ದರಿಂದಲೇ ಚೋಮ “ಹೊಲತಿ ಇರುವಾಗಲೇ ನೇಗಿಲು ಹಿಡಿಯಬೇಕೆಂಬ ಆಸೆ ಮಾಡಿದ್ದೆ ಅದನ್ನು ಕಾಣಲು ಋಣವಿಲ್ಲದೆ ಹೋಯಿತು. ಸಾಯುವುದರೊಳಗೆ ನಾನಾದರೂ ಆ ಭಾಗ್ಯ ಪಡೆದೇನು ನನ್ನ ಮಕ್ಕಳಾರು ಕಂಡಾರು ಎಂದು ಆಸೆ ಹಿಡಿದರೆ ನೀನೆ ಕಲ್ಲಾಕುತ್ತಿಯಲ್ಲ” ಎಂದು ತನ್ನ ಮಗಳಿಗೆ ಹೇಳುತ್ತಾನೆ. ಈ ಮಾತು ದಲಿತರ ಏಳಿಗೆಯ ಪ್ರಯತ್ನವನ್ನು ಭೂತ, ವರ್ತಮಾನ ಮತ್ತು ಭವಿಷ್ಯದ ನೆಲೆಗಳಲ್ಲಿ ಊಹಿಸಬಹುದಾಗಿದೆ. ಆ ಭವಿಷ್ಯದ ಕನಸು 1950ರ ನಂತರ ಅಸ್ಪೃಶ್ಯರು ಭೂಮಿಯ ಒಡೆತನ ಹೊಂದುದನ್ನು ಕುಸುಮಬಾಲೆಯ ರಚನೆಯ ಕಾಲದಲ್ಲಿ ಕಾಣಬಹುದಾಗಿದೆ.

ಇದರ ಸೂಕ್ಷ್ಮ ನೆಲೆಯನ್ನು ಅರಿತ ಸಂಕಪ್ಪಯ್ಯನವರು ಪರಂಪರೆಯ ನಿಯಮಗಳನ್ನು ಸಾಕಾರಗೊಳಿಸುವಂತೆ ಕಾಣುತ್ತಾರೆ. ಚೋಮ ‘ಇನ್ನೇನಿಲ್ಲ ದಣಿಗಳಿಗೆ ಇಷ್ಟೆಲ್ಲ ಒಕ್ಕಲು ಮಕ್ಕಳಿದ್ದಾರೆ. ಈ ಚೋಮನಿಗೆ ಒಂದು ಹಾಳು ಕೊಂಪೆಯನ್ನು ಗೇಣಿ ಕೊಟ್ಟಿದ್ದರೆ ನಿಮ್ಮ ಹೆಸರು ಹೇಳಿ ಬದುಕುತ್ತಿದ್ದ’ ಚೋಮನ ಮಾತು ಕೇಳಿ ಸಂಕಪ್ಪಯ್ಯನವರು ಸಹಜವಾಗಿ ಆಶ್ಚರ್ಯಪಡುತ್ತಾ ಹೊಲೆಯರು ಬೇಸಾಯಗಾರರಾಗುವುದುಂಟೆ? ಎನ್ನುತ್ತಾ ಬಂಜರು ಬಿದ್ದ ಜಮೀನುಗಳೆಷ್ಟೋಇದ್ದವು. ಅದನ್ನು ಸಾಗುವಳಿ ಮಾಡಬಾರದೆಂದು ತೋಚಿದ್ದರಿಂದ ಹಾಗೆ ಬಿಟ್ಟಿದ್ದು ಚೋಮ ಕೇಳಿದಾಗ ಸಂಕಪ್ಪಯ್ಯನವರು ಅವರ ತಾಯಿಯ ಬಳಿ ಪ್ರಸ್ತಾಪಿಸಲು ಹೋಗಿ ಧನಿಗಳು ತಿರುಗಿ ಬಂದು ‘ಚೋಮ ಇದುವರೆಗೆ ನಮ್ಮ ಹಿರಿಯರು ನಿಮ್ಮವರಿಗೆ ಗೇಣಿಗೆಗೆ ಗದ್ದೆ ಕೊಟ್ಟಿದಿಲ್ಲ ಈಗ ಹಾಗೆ ಕೊಡಲಿಕ್ಕೆ ಬರುವಹಾಗೆ ಇಲ್ಲ’ ಎನ್ನುತ್ತಾರೆ. ಅಲ್ಲದೆ ಮನೆಯೊಳಗಿಂದ ಸಂಕಪ್ಪಯ್ಯನವರ ತಾಯಿ ‘ಅಬ್ಬಾ! ಈ ಹೊಲೆಯರಿಗೆ ಬಂದ ಸೊಕ್ಕೇ ಎಂದು ಶಪಿಸುತ್ತಾಳೆ. ಶೂದ್ರನಿಗೆ ವಿದ್ಯೆ, ಬುದ್ಧಿ, ಭೂಮಿ, ಆಹಾರ ಇತ್ಯಾದಿಗಳನ್ನು ಕೊಡಬಾರದು. ಒಂದು ವೇಳೆ ಯಾವಾನಾದರೂ ಹೇಳಿದರೆ, ನೀಡಿದರೆ ಹೇಳಿದವನು, ಕೇಳಿದವನು ಕೂಡಿಯೇ ನರಕಕ್ಕೆ ಹೋಗುತ್ತಾರೆ ಎಂಬ ಮನುವಿಧಿತ ಕಟ್ಟಾಳೆಯನ್ನು ಪಾಲಿಸುವ ವಕ್ತಾರರಾಗಿ ಕಂಡುಬರುತ್ತಾರೆ.

ಚೋಮ ದಲಿತ ವರ್ಗಕ್ಕೆ ಸೇರಿದ ಹೊಲೆಯನಾಗಿರುವುದರಿಂದಲೇ ಪ್ರಾಚೀನ ಮನುವಿದಿತ ಕಾನೂನುಗಳಿಗೆ ತಾನು ಬದ್ಧನಾಗಿದ್ದಾನೆ. ಆತನಿಗೆ ಅನಕ್ಷರಸ್ಥನಾಗಿರುವುದರಿಂದ ಸಮಕಾಲೀನ ಸ್ವಾತಂತ್ರ್ಯದ ಹೋರಾಟ, ಅಂಬೇಡ್ಕರ್‌ರ ಹೋರಾಟದ ಯಾವ ನೆಲೆಯು ಗೋಚರವಾಗದು. ಮತ್ತೊಮ್ಮೆ ಗೇಣಿ ಕೇಳಲು ಮುಂದಾದಾಗ ಜಾತಿ ನೆಲೆಯ ಸೂಕ್ಷ್ಮತೆಯನ್ನು ಅರಿತ ಬೆಳ್ಳಿ ನೀನು ಧನಿಯವರೊಂದಿಗೆ ಬಾಯಿ ತೆರೆದು ಮರ್ಯಾದೆಯನ್ನು ಕಳೆದುಕೊಳ್ಳಬೇಡ ಹಾಗೆ ಮಾಡಲು ಬಂಟರಾಗಿಯೋ, ಗೌಡರಾಗಿಯೋ ಹುಟ್ಟಬೇಕಿತ್ತು. ಹೊಲೆಯರಾಗಿ ಹುಟ್ಟಿದ ನಮಗೆ ಸಾಧ್ಯವಿಲ್ಲ ಎನ್ನುತ್ತಾಳೆ. ಲೋಕವೆನ್ನುವ ಹಾಗೆ 'ಕರಿನಾಯಿ ಬಿಳಿದಾಗದೆಂದು' ಬಲ್ಲವಳು ಹಾಗಾಗಿ ಹೊಲೆಯರಾಗಿ ಹುಟ್ಟಿ ಬೇಸಾಯ ಮಾಡಬೇಕೆಂದರೆ ಆಗುತ್ತದೆಯೇ? ಧನಿಗಳಾದರು ಏನು ಮಾಡುತ್ತಾರೆ. ಊರಿನ ಕಟ್ಟಳೆ ಎಂದು ಚೋಮನ ಆಸೆಯನ್ನು ನಿರಾಸೆಗೊಳಿಸುತ್ತಾಳೆ.

ಚೋಮ, ಹೊಲತಿ ಇದ್ದಾಗ ಮಾಡಿದ ಸಾಲಕ್ಕೆ ಹೊಲತಿ ತೀರಿದ ನಂತರ ಚೋಮ ಹಾಗೂ ಚೋಮನ ಮಕ್ಕಳು ಮತ್ತು ಮನೆಯ ಕುಟುಂಬ ಸದಸ್ಯರೆಲ್ಲರೂ ದುಡಿದು ತೀರಿಸುತ್ತಿದ್ದಾಗ ಬೆಳ್ಳಿ ಅದನ್ನು ತೀರಿಸಿಬರುವುದರ ಜೊತೆಗೆ ತನ್ನ ಶೀಲವನ್ನು ಮಿಂಗೇಲದೊರೆಗೆ ನೀಡಬೇಕಾಗುತ್ತದೆ. ಬೆಳ್ಳಿಯ ಅಣ್ಣ ಗುರುವ ಕ್ರೈಸ್ತ ಧರ್ಮದ ಮಾರಿಯನ್ನು ಮದುವೆಯಾಗಿದ್ದರ ಮೂಲಕ ಮತಾಂತರಹೊಂದಿ ಜಮೀನು ಪಡೆದು ಬೇಸಾಯ ಮಾಡುತ್ತಾನೆ. ಕೊನೆಗೆ ಚೋಮನು ಜಾತಿಕೆಟ್ಟರೂ ಸಹ ಇಗರ್ಜಿಯ ಸೊತ್ತು ಪಡೆಯಲು  ಬಯಸುತ್ತಾನೆ. ಆದರೆ ಅಲ್ಲೂ ಆ ದಾಸ್ಯ ತಪ್ಪುವುದಿಲ್ಲ ಎಂಬ ಅರಿವಾಗುತ್ತದೆ. "ಶೂದ್ರನು ಸೇವೆಗಾಗಿಯೇ ಹುಟ್ಟಿದವನು ಆದುದರಿಂದ ಬ್ರಾಹ್ಮಣನು ಅವನಿಂದ ಎಲ್ಲಾ ಸೇವೆಗಳನ್ನು ಮಾಡಿಸಿಕೊಳ್ಳಬಹುದು. ಶೂದ್ರನು ಸ್ವಾಮಿಯಿಂದ ಬಿಡಲ್ಪಟ್ಟರೂ ಅವನು ತನ್ನ ದಾಸ್ಯದಿಂದ ಬಿಡುಗಡೆ ಹೊಂದುವುದಿಲ್ಲ. ದಾಸ್ಯತ್ವದ ಹೊರತು ಬೇರೆ ಕಾರ್ಯವಿಲ್ಲ, ಎಂಬ ಮನುವಿಧಿತ ಕಟ್ಟಳೆ ಶೂದ್ರರನ್ನು , ದಲಿತರನ್ನೂ ದಾಸ್ಯತ್ವದಿಂದ ಬಿಡುಗಡೆಗೊಳಿಸುವುದು. ಆದರೆ ಕುಸುಮಬಾಲೆಯಲ್ಲಿನ ಕಾಲಕ್ಕೆ ಶೂದ್ರರು ಭೂಮಿಯ ಒಡೆತನ ಸಾಧಿಸುವಲ್ಲಿ ಯಶಸ್ವಿಯಾದರು. ಆದ್ದರಿಂದ ಚೋಮ ಜಾತಿಯ ಚೌಕಟ್ಟಿನಿಂದಾಚೆ ಯೋಚನೆ ಮಾಡಲಾರ. ಆದರೆ ಅವನ ನೋವು, ಹಿತಾಸೆ, ಸಿಟ್ಟುಗಳು, ಜಾತಿವ್ಯವಸ್ಥೆಯ ಕ್ರೌರ್ಯವನ್ನು ಬುಡ ಮೇಲು ಮಾಡುವ ಆವೇಶ ವ್ಯಕ್ತವಾಗುವುದು, ಅವನ ಡಮ್ಮ ಡಮ್ಮಮ ಡಕ್ಕ ಡಕ್ಕ ದುಡಿಯ ಬಡಿತದಲ್ಲಿ ಮಾತ್ರ.

ದಲಿತರ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿರುವ ಈ ದುಡಿಯ ಬಡಿತ ಮೇಲ್ವರ್ಗದವರಿಗೆ ಆಗದು. ಆದ್ದರಿಂದಲೇ ಸಂಕಪ್ಪಯ್ಯ ಅವನ ಮನೋ ವೇದನೆಯನ್ನು ಅರ್ಥ ಮಾಡಿಕೊಳ್ಳದೆ ಹೊತ್ತುಗೊತ್ತು ಒಂದೂ ಇಲ್ಲ. ಹುಟ್ಟು-ಸಾವು, ಹಗಲು-ಇರುಳು ಎಲ್ಲಾ ಒಂದೇ ಎನ್ನುತ್ತಾರೆ. ಆ ಮಾತು ಕಲೆಗೆ ಅನ್ವಯಿಸಿ ನೋಡುವುದಾದರೆ ದಲಿತರ ಸಾಂಸ್ಕೃತಿಕ ಅಸ್ಮಿತೆಯಿರುವುದು ದಲಿತರ ಕಲವಂತಿಕೆಯಲ್ಲಿ ಹುಟ್ಟು -ಸಾವಿಗೂ ಬೇಕೂ ಹಗಲು-ಇರುಳು ಇದರ ನಾದ ಬೇಕು ಕಾಲಾತೀತವಾಗಿ ಈ ಕಲೆ ಉಳಿದುಕೊಂಡು ಬಂದಿದೆ. ಇಂತಹ ಸಂದರ್ಭ ದೇವನೂರರ ಕಥೆಗಳಲ್ಲೂ ವ್ಯಕ್ತವಾಗಿದೆ. ಮಾರಿಹಬ್ಬದ ಸಂದರ್ಭದಲ್ಲಿ ತಮಟೆ ಬಡಿಯುತ್ತಿದ್ದು ಅಲ್ಲಿ ಕುಣಿಯುವಾಗ ಅಮಾಸನ ಕತ್ತಿಗೆ ಹಾಕುವ ಹೂವಿನ ಹಾರ ಮುಂದೆ ಜಾತಿ ವ್ಯವಸ್ಥೆಯ ಬಲಿಪಾಶಕ್ಕೆ ಒಳಗಾಗುವುದನ್ನು ಸೂಚಿಸುತ್ತದೆ. ಮುಂದೆ ಅವನು ಗೌಡರ ಹಟ್ಟಿಯಲ್ಲಿ ಕುರಿಕಾಯುವ ಕೆಲಸಕ್ಕೆ ನೇಮಕವಾಗುತ್ತಾನೆ.

ಜಾತಿಯಲ್ಲಿ ಕೀಳಾಗಿದ್ದರಿಂದಲೇ ಚೋಮನ ಮಗ ನೀಲ ನೀರಿನಲ್ಲಿ ಮುಳುಗಿ ಸಾಯುವಾಗ ಬ್ರಾಹ್ಮಣ ಯುವಕನು ಅವನನ್ನು ರಕ್ಷಿಸಲು ಮುಂದದಾಗ ಅವನ ಹಿರಿಯರು 'ಅವನು ಹೊಲೆಯನಲ್ಲವೆ' ಎಂದು ಬೆದರಿಸಿದರು. ತರುಣನು ತಳಮಳಿಸಿ ನಿಂತ ಕಾಲೆಡವಿ ಬಿದ್ದ ಚೋಮ ಎಲ್ಲವನ್ನೂ ಕಂಡ ನೀಲ ಎಲ್ಲರ ಕಣ್ಣೆದುರಿನಲ್ಲಿ ಮುಳುಗಿದ. ಚೋಮ ಬರುವುದರೊಳಗೆ ಎಲ್ಲವೂ ಮುಗಿದಿತ್ತು' ಚೋಮ ಎಲ್ಲವನ್ನು ನೋಡಿ ಬೊಬ್ಬಿಡತೊಡಗಿದ. ಕೊನೆಗೆ ಬ್ರಾಹ್ಮಣ ತರುಣ ನೀರಿಗೆ ದುಮುಕಿ ಶವವನ್ನು ಮೇಲಕ್ಕೆ ತಂದ. ಆದರೆ ಪ್ರಾಣವಿರಲಿಲ್ಲ. ಆಗ ಚೋಮ ಹೊಲೆಯನ ಬಾಳ್ವೆಯೇ ಹುಣ್ಣು ಎಂಥದ್ದು ಎಂಬುದು ಅನುಭವವಾಯಿತು. ದಲಿತರ ಶ್ರಮವನ್ನು ಉಣ್ಣುವ ಮೇಲ್ವರ್ಗದ ಬ್ರಾಹ್ಮಣ ಜಮೀನ್ದಾರಿ ಶಾಹಿಗಳೂ ಚೋಮ ಬೆಳ್ಳಿ, ಗುರುವ, ಚೆನಿಯ, ನೀಲ, ಕಾಳ ಎಲ್ಲರೂ ದುಡಿದು ಅವರ ಪಡೆದದ್ದು ಎರಡು ಪಾವು ಅಕ್ಕಿ ಮಾತ್ರ. ಅದರಲ್ಲಿ ಅವರ ಜೀವನ ನಡೆಯಬೇಕಿತ್ತು. ಇದರಿಂದಾಗಿ ಚೋಮ ಎರಡು ಹೊತ್ತಿನ ಊಟಕ್ಕೆ ನೆರವಾಗಲು ಗೇಣಿ ಮಾಡಬೇಕೆಂದು ಬಯಸಿದನೇ ಹೊರತು ಜಮೀನ್ದಾರನಾಗಬೇಕೆಂಬ ಬಯಕೆಯಿಂದಲ್ಲ. ಅಲ್ಲದೆ ಬಿರುಮ ಪೂಜಾರಿಯ ತಾನು ಪಡೆದ ಅಕ್ಕಿಗಾದರೂ ಹೆಂಡವನ್ನು ಸರಿಯಾಗಿ ಕೊಡದೆ ಅವನು ಸಹ ಚೋಮನಿಗೆ ಮೋಸಮಾಡುವುದು. ಇಡೀ ಚರಿತ್ರೆಯುದ್ದಕ್ಕೂ ನಡೆದು ಬಂದ ದಲಿತರ ಶೋಷಣೆಯನ್ನು ವಿವರಿಸುತ್ತದೆ. ಚರಿತ್ರೆಯ ನಿರ್ಮಾಣದಲ್ಲಿ 'ಅರಸರು ರಾಜ್ಯವನ್ನು ಕಟ್ಟುವಲ್ಲಿ, ಉಳಿಸುವಲ್ಲಿ, ಬೆಳೆಸುವುದರಲ್ಲಿ ದಲಿತರ ಉಪಯೋಗವನ್ನು ಸಂದರ್ಭಾನುಸಾರವಾಗಿ ಬಳಸಿಕೊಂಡರೂ ಆದರೆ ಉಪಯೋಗ ಪಡೆದ ನಂತರ ಮತ್ತೆ ಹೊರಗೆಸೆದ ಸಂದರ್ಭಗಳು ಹೆಚ್ಚಾಗಿವೆ' ಎಂಬ ಅರವಿಂದ ಮಾಲಗತ್ತಿಯವರ ಅಭಿಪ್ರಾಯ ಒಪ್ಪುವುದಾಗಿದೆ.

ಆದರೆ ಸ್ವತಂತ್ರೋತ್ತರ ಸಂದರ್ಭದಲ್ಲಿ ಕರ್ನಾಟಕದ ಮೊದಲ ತಲೆಮಾರಿನ ಅಕ್ಷರಸ್ಥ ದಲಿತರಲ್ಲಿ ಸೆಯ ವಿರುದ್ಧ ಸಿಡಿದು ನಿಲ್ಲಬೇಕಾದ ಸ್ಥಿತಿ ಅನಿವಾರ್ಯವಾಗಿ ಕಾಣಿಸಿಕೊಂಡಿದ್ದರ ಪ್ರಭಾವದಿಂದಾಗಿ 1974ರಲ್ಲಿ ಲಿತ ಸಂಘರ್ಷ ಸಮಿತಿ ರೂಪುಗೊಂಡಿತ್ತು. ದಲಿತ ಪ್ರಜ್ಞೆ ಐತಿಹಾಸಿಕ ಪ್ರಜ್ಞೆಯಾಗಿ ರೂಪುಗೊಂಡಿತ್ತು. ದರ ಫಲವಾಗಿ ಜಾತಿ ವ್ಯವಸ್ಥೆ ವರ್ಣಾಶ್ರಮ ವ್ಯವಸ್ಥೆ, ಬ್ರಾಹ್ಮಣಶಾಹಿ ವ್ಯವಸ್ಥೆಯನ್ನು ವಿರೋಧಿಸುತ್ತಾ ಂತರ್ಜಾತಿ ವಿವಾಹಕ್ಕೆ ಪ್ರೇರಣೆ ನೀಡುವುದು ವರ್ಗ, ವರ್ಣ, ಲಿಂಗ ತಾರತಮ್ಯವನ್ನು ತೊಡೆದು ಹಾಕುತ್ತಾ ವಸ್ಥೆಯ ಮುಖವಾಡವನ್ನು ದಲಿತ ಬಂಡಾಯದ ಬರಹಗಾರರು ಕಳಚಿ ಹಾಕಿದರು. ಮೀಸಲಾತಿ ಸಂವಿಧಾನದ ೂಲಭೂತ ಹಕ್ಕುಗಳಿಗಾಗಿ ಒತ್ತಾಯಿಸಿ ಪ್ರತಿಭಟಿಸತೊಡಗಿದರು. ಆದರೂ ಇಲ್ಲಿನ ಜಾತಿಯ ವ್ಯವಸ್ಥೆ ಬದಲಾವಣೆಗೆ ಣಿಯಾಗುತ್ತಿತ್ತು. ದೇವನೂರರ ಮೂಡಲ ಸೀಮೆಯಲ್ಲಿ ಕೊಲೆಗಿಲೆ, ಮಾರಿಕೊಂಡವರು, ಗ್ರಸ್ತರು, ದತ್ತ, ಮಾಸ, ಒಂದು ದಹನದ ಕಥೆ, ಕಥೆಗಳಲ್ಲಿ ದಲಿತ ಸಂವೇಧನೆಯ ನೋವು ಹತಾಶೆಯನ್ನು ದಲಿತರ ಬಲೀಕರಣಕ್ಕೆ ಮೇಲ್ವರ್ಗದವರು ತೊಡಕಾಗಿರುವುದನ್ನು ಕಾಣಬಹುದು.

ಒಡಲಾಳದ ಕಡಲೆಕಾಯಿ ಪ್ರಸಂಗವು ದಲಿತರ ಹಸಿವಿನ ಸ್ಥಿತಿಯನ್ನು ಸಾಕವ್ವನ ಮನೆಯ ತೂತುಗಳು ಲಿತರ ಬದುಕಿನ ಒಡತನವನ್ನು ಸೂಚಿಸುತ್ತದೆ. ಆದರೂ ಶಿವು ರಾಜ್ಯ ಆಳುವ ದೊರೆಯಾಗಲಿ ಎಂದು ಮಧರ್ಮವನ್ನು ಕೇಳುವ ಅಂಬೇಡ್ಕರ್‌ರ ಆಸೆಯಂತೆ ದಲಿತರು ಈ ದೇಶ ಆಳುವ ದೊರೆಗಳಾಗಬೇಕೆಂದು ವಿಷ್ಯದ ಕನಸನ್ನು ಸಾರಿದ್ದಕ್ಕೆ ಇಂದಿಗೂ ಆಗದಿರುವುದು ದುರಂತ. ಮೂಡಲ ಸೀಮೇಲಿ ಕೊಲೆಗಿಲೆಯಲ್ಲಿ ಜನ ಮಾತು 'ಶಂಭಪ್ಪ ರಾಜ ಅನ್ನಾಕಿಲ್ಲ ಗೀಜ ಅಂತಿನಿ. ಯಾಕಂದ್ರ ನೀವು ವಲರ್‌ರುಕಲಾ' ಎಂಬ ಾತನ್ನು ತಾಯಿಗೆ ಹೇಳುವಾಗ ದಲಿತ ಜಾತಿಯ ಮೇಸ್ಟ್ರೋಬ್ಬ ಉತ್ತಮ ಜಾತಿಯ ಮೇಸ್ಟ್ರ ಮನೆಯ ೂಟದಲ್ಲಿ ಟೀ ಕುಡಿಯುತ್ತಿರುವುದನ್ನು ಪ್ರಸ್ತಾಪಿಸುತ್ತ ದಲಿತರ ಶಿಕ್ಷಣದ ಅವಶ್ಯಕತೆಯನ್ನು ಹೇಳುತ್ತದೆ. ಸ್ತರು ಕತೆಯ ನಾಯಕ, ಮಠಗಿಠ ಎಲ್ಲಸೋಗು ಎನ್ನುತ್ತಾನೆ. ಹೀಗೆ ಅವರ ಕಥೆಗಳು ಕೂಡ ದಲಿತ ಂವೇಧನೆಯ ಸ್ವರೂಪವನ್ನು ಬಿಚ್ಚಿಡುತ್ತವೆ.

ಚೋಮನ ದುಡಿಯ ಚೋಮ ಸರಿ–ತಪ್ಪಿನ ಅರಿವಿಲ್ಲದೆ ಮೇಲ್ವರ್ಗದವರನ್ನು ಪ್ರಶ್ನಿಸಲಾರದವನಾಗಿದ್ದಾನೆ. ಲ್ಲಿ ಬೆಳ್ಳಿಯು ಜಮೀನ್ದಾರಿ ವ್ಯವಸ್ಥೆಗೆ ಬಲಿಯಾಗಿ ತನ್ನ ಶೀಲವನ್ನು ಕಳೆದುಕೊಂಡರೆ ಕುಸುಮಬಾಲೆಯಲ್ಲಿನ ್ರೀಯರು ಕಾಮದ ಸುಖಃಕ್ಕಾಗಿ ದಲಿತ ಪುರುಷರನ್ನು ಆಶ್ರಯಿಸಿ ಬರುವುದನ್ನು ಚನ್ನ –ಕುಸುಮರ ಸಂಬಂಧ ಾಗೂ ಮೇಷ್ಟ್ರು ಮದ್ವಾಚಾರ್ಯನ ಮಗಳು ಭಗವತಿ ಹೊಲೆಯ ಅಮಾಸನನ್ನು ಕಂಡು 'ಎರಡು ಹೊಲೆಯಲ್ಲಿವೆ' ಂಬ ಪುಳಕಕ್ಕೆ ಒಳಗಾಗುತ್ತಾಳೆ. ಜೀವಾತ್ಮ ಮತ್ತು ಮಂಚಗಳೂ ಮಾತಾಡುವಾಗ ರಾಜ ಹೊರಗಡೆ ಹೋಗಿದ್ದಂತಹ ಂದರ್ಭದಲ್ಲಿ ದಿನಕ್ಕೆ ಒಬ್ಬೊಬ್ಬರ ಕೈಲಿ ಮಾಡ್ಸಕ್ಕಳೋಳು.

ಸಾವಿತ್ರಿ ಮತ್ತು ದಲಿತನನ್ನು ವಿವಾಹವಾದದ್ದು ಚನ್ನನ್ನು ವಿಷಯ ಪ್ರಸ್ತಾಪದಲ್ಲೂ ಅಕ್ಕಮಹಾದೇವಮ್ಮ ಜೀತಗಾರ, ಮಲ್ಲಾಜಮ್ಮ, ಹುಟ್ಟಿನ ಸಂದರ್ಭವೂ ಚೋಮನ ದುಡಿಗೆ ವೈರುದ್ಯದ ರೀತಿಯಲ್ಲಿ ವ್ಯಕ್ತವಾಗಿ ಲ್ಲಿ ಮೇಲ್ಜಾತಿಯ ದಬ್ಬಾಳಿಕೆ ಕ್ರೌರ್ಯ ಕಂಡರೆ ಕುಸುವಬಾಲೆಯಲ್ಲಿ ಮೇಲ್ವರ್ಗದ ಸ್ತ್ರೀಗಳು ಕೆಳಜಾತಿಯವರನ್ನು ಯಸಿ ಬರುವುದು ಅಂತರ್ಜಾತಿ ವಿವಾಹದಿಂದಾಗಿ ಜಾತಿ ವಿನಾಶ ಸಾದ್ಯ ಇದೆ ಎಂಬ ಲೋಹಿಯಾರ ತನೆ ಇಲ್ಲಿ ಕಂಡುಬಂದಿದೆ. ಅಲ್ಲದೆ ಕುರಿಯಯ್ಯನ ನನ್ನಿ ಪ್ರಸಂಗದಲ್ಲಿ ದಲಿತರದೇ ತಪ್ಪಿತಸ್ಥರೆಂಬ ವನೆ ವ್ಯಕ್ತವಾದರೆ 'ಗೊತ್ತಯ್ಯಾ ? ಕೇಳಿ ನಂ ಜಾತಿ ಮೂಲದ ಬಡ್ಡೆತ್ತವು ಕಾಯ್ಕಂಡಿದ್ದು ತಂ ಕಣ್ಣುಗ ೕಕ್ ಬೇಕಾದ ಉತ್ತಮರ ಹೆಂಡ್ತಿರ ಹೊತ್ಗಂಡು ನಡ್ದುಬುಡೋರು ಎಲ್ಲಿಗ್ಯ ? ಬೆಟ್ಟದ ಕಿಬ್ರಿಗ ಆಯ್ತಾ ? ಂಬ ಪ್ರಸಂಗವು ಹಿಂದಿನಿಂದಲು ಇಂತಹ ಸಂಬಂಧಗಳಿದ್ದವು ಎಂಬುದು ಸೂಚನೆಯಾಗಿ ನಿಲ್ಲುತ್ತದೆ.

'ಚಾತುರ್ವರ್ಣ ಪದ್ದತಿಯ ಪ್ರಕಾರ ಮೇಲ್ಜಾತಿಯವರು ಯಾವುದೇ ಕೆಟ್ಟ ಕೆಲಸ ಮಾಡಿದರು ಳೆನಿಸುವುದಿಲ್ಲ ಕೆಳಜಾತಿಯವರು ಒಳ್ಳೆ ಕೆಲಸ ಮಾಡಿದರು ಉಚ್ಚರೆನಿಸುವುದಿಲ್ಲ. (ಮನುಸ್ಮೃತಿ 10/73) ಲ್ಲಿ ವರ್ಣ ಸಂಕರಕ್ಕೆ ಒಳಗಾದ ಸ್ತ್ರೀ ಪಾತ್ರಗಳಿಗೆ ಯಾವ ಶಿಕ್ಷೆಯು ಆಗದೆ ಸಮಾಜದಲ್ಲಿ ತಲೆ ಎತ್ತಿ ನಿಲ್ಲುವ ನ್ನಿವೇಶಗಳು ಕಾದಂಬರಿಯುದ್ದಕ್ಕೂ ಕಂಡುಬರುತ್ತವೆ. ಇಂತಹ ವರ್ಣ ಸಂಕರದ ಫಲವಾಗಿ ಜನಿಸಿದ ಾಡನು ತನ್ನ ಏಳಿಗೆಗಾಗಿ ಕಳ್ಳತನ, ಮೋಸ, ಖೋಟಾನೋಟಿನವರಿಗೆ ಮಾಡಿ ದೊಡ್ಡ ವ್ಯಕ್ತಿಯಾಗಿ ಳೆದು ನಿಲ್ಲುತ್ತಾನೆ. ಸಿದ್ದೂರ ಬಸಪ್ಪ ಸೋಮಿಯರ ಹಟ್ಟಿಯೇ ದನದ ಕೊಟ್ಟಿಗೆಯಾಗುತ್ತವೆ. ಆದರೆ ಸಿವಿನಿಂದ ಗಾರಸಿದ್ಮಾವ ಮೇಲ್ಜಾತಿಯವರು ತೋಟದಲ್ಲಿ ಎಳನೀರು ಕಿತ್ತು ಕುಡಿಯುವಾಗ ಗಾರಸಿದ್ಮಾವನನ್ನು ುಖಂಡ ಕಂಬಕ್ಕೆ ಕಟ್ಟಿ ಒಡೆಯುತ್ತಿರುತ್ತಾನೆ. ಆದರೂ ಯಾವುದೇ ಎದೆಗುಂದದೇ ಕುಡಿಯಲು ಹದಿನಾರು ಳನೀರನ್ನು ಕಿತ್ತೆ ಎನ್ನುತ್ತಾನೆ 'ಒಂದನ್ನು ಅಥವಾ ಎರಡನ್ನೂ ಕಿತ್ಗತರ ಆದೇ ಹರಿನಾರು ಎಳನೀರು ೕಳ್ತಾರ ಎಂಬ ಮುಖಂಡನ ಪ್ರಶ್ನೆಗೆ ಅವ್ನೆಲ್ಲಾ ಕುಡುದೇ ಒಪ್ಕೋತ್ತೀರಾ' ಎಂಬ ಚಾಲಕಿನ ಮಾತು ುಖಂಡನನ್ನು ದಂಗು ಬಡಿಸುತ್ತದೆ. ಅಲ್ಲದೆ ನಾಗರಾಜ್‌ರವರು ಅವನನ್ನು ಬಿಡಿಸಲು ಬಂದಾಗ ಬಯ್ಯಾ ೀಪ್ಪ್ರ ನಿಮ್ ಜಾತ್ಯವರ್‍ಗ ನೀ ಓದ್ದವ ವಸಿ ಬುದ್ದಗಿದ್ದಿ ಹೇಳುದ್ರೆ ಆಗ್ಲಾರು ಕೇಳಿವ್ಯನ ಎಂದು ದಲಿತರನ್ನೂ ಲಿತರಿಂದ ಹತ್ತಿಕ್ಕುವ ಮೇಲ್ವರ್ಗದ ಪಿತೂರಿಯನ್ನು ಅರಿಯಬಹುದು. ದಲಿತ ಸಂಘರ್ಷ ಸಮಿತಿಯ ಂಘಟನ ಬಲವಿದ್ದು ನಾಗರಾಜು ನೀವು ಒಡೆದಿದ್ದು ತಪ್ಪ ಎಂದಾಗ ಇಬ್ರದ್ದೂ ತಪ್ಪು ನಾನು ನೂರಾ ಂದು ಮಠಕ್ಕೆ ಕಟ್ಟುತ್ತೇನೆ. ಗಾರಸಿದ್ದನು ಕಟ್ಬೆಡ್ಲಿ ಎಂದಾಗ ಮುಖಂಡನ ನೂರು ರೂ ಕಿತ್ತು ಮಠಕ್ಕೆ ಕೊಟ್ಟು ಾಲ ಅಂದ್ಕಳ್ಳಿ ಎಂಬ ಮಾತು ಕುತಂತ್ರ ಸಮಾಜಕ್ಕೆ ತಿರುಮಂತ್ರ ಹಾಕಿ ಬರುವುದನ್ನೂ ಕಾಣಬಹುದು. ಳ್ಳವರು ದಲಿತರನ್ನು ಅತಂತ್ರ ಸ್ಥಿತಿಗೆ ಸಿಲುಕಿಸಿ ಅವರ ಜೀವನವನ್ನು ಬರಿದುಮಾಡುವ ಜಾತಿವಾದಿ ನಸ್ಸುಗಳ ಕುತಂತ್ರವನ್ನು ಕಾಣಬಹುದು. ಆದರೆ ಇಂಥ ಚಾಕಚಕ್ಯತೆಯನ್ನು ಚೋಮನ ದುಡಿಯುದ್ದಕ್ಕೂ ಲ್ಲೂ ಕಾಣಲಾಗುವುದಿಲ್ಲ.

ಯಾಕೆಂದರೆ ಸ್ವಾತಂತ್ರೋತ್ತರ ನಂತರ ದಲಿತರ ಸಂಘಟನೆಯ ಬೆಳವಣಿಗೆ ಇಡೀ ಸಮಾಜವನ್ನು ಪ್ರಶ್ನೆ ಮಾಡುತ್ತಿದ್ದು ಕಾನೂನುಬದ್ದ ಹಕ್ಕುಗಳನ್ನು ಕೇಳುವ ಚಲಾಯಿಸುವವರಾಗಿದ್ದಾರೆ. ಗಾರಸಿದ್ದ ವಿವಿಧ ವೃತ್ತಿ ಗಾರೆ ಕೆಲಸ, ದನದ ವ್ಯಾಪಾರ, ದಲ್ಲಾಳಿ ಇತ್ಯಾದಿ ಕೆಲಸ ಮಾಡುತ್ತಾ ಊರೂರು ಸುತ್ತಿದ್ದರಿಂದ ತನ್ನ ಸುತ್ತಲ ಸಮಾಜದ ಬಗ್ಗೆ ಎಚ್ಚರಿಕೆ ವಹಿಸಿದ್ದಾನೆ. ನಾಟಕಗಳಲ್ಲಿ ಪಾರ್ಟ್ ಮಾಡುತ್ತಾನೆ ಇದೆಲ್ಲದರ ಅರಿವಿನಿಂದ ಮೇಲ್ವರ್ಗದ ಸಿವಬಸಪ್ಪನ ಹೋಟೆಲ್‌ಗೆ ನುಗ್ಗಿ ಟೀ ಬೋಂಡವನ್ನು ಮೇಲ್ಜಾತಿಯವರ ಸರಿಸಮನಾಗಿ ಕುಳಿತು ತಿಂದುಬರುತ್ತಾನೆ. ಮೇಲ್ವರ್ಗದವನಾದ ಸಿವಬಸಪ್ಪ ದುರುಗುಟ್ಟಿ ನೋಡುತ್ತಾನಾದರೂ ಏನು ಮಾಡಲು ಸಾಧ್ಯವಿರಲಿಲ್ಲ. ಯಾಕೆಂದರೆ ಭಾರತದಾಂದ್ಯಂತ ನಿಷೇಧ ಕಾನೂನು ಜಾರಿಯಲ್ಲಿದ್ದು ಅನುಚ್ಛೇದ ಐದಿನೈದರಂತೆ ತಾರತಮ್ಯವನ್ನು ನಿಷೇದಿಸಿತ್ತು.

ಶಾಲೆಯ ಬಳಿ ಜ್ಯೋತಮ್ಮದೀರು ವಿವಿಧ ಜಾತಿಯ ಜ್ಯೋತಮ್ಮದೀರು ಕುಳಿತು ಚರ್ಚಿಸುವುದು ಸಾಮಾಜಿಕವಾಗಿ ಎಲ್ಲಾರು ಸಮಾನ ನೆಲೆಗೆ ಬರುವ ಸೂಚನೆಯಾಗಿ ಕಂಡುಬರುತ್ತದೆ. ಮದ್ವಾಚಾರ್ಯ ಮತ್ತು ಚನ್ನನ ನಡುವಿನ ಬಸ್‌ನಿಲ್ದಾಣದ ಸಂಭಾಷಣೆಯೂ ಮದ್ವಾಚಾರ್ಯರು ವೃತ್ತಿಯಲ್ಲಿ ಶಿಕ್ಷಕರಾಗಿದ್ದು ಸಂಸ್ಕೃತ ಜನ್ಯ ಶಬ್ದಗಳನ್ನು ಬಳಸುತ್ತಾ ನೋಡತ್ತ ಚನಃ, ನನಗ್ಯಾಕೋ ಡೌಟಪ್ಪಃ ಅಂದಹಾಗೆ ಚೆನ್ನಃ ನಾನು ನಿನಗೆ ಚನ್ನಾಗಿ ಗೊತ್ತಲ್ಲಃ ನೀನು ಕಂಡ ಹಾಗೆ ನನಗಂತು ಜಾತಿ ಬೇದವು ಇಲ್ಲಪಃ ನಾನು ಮುಟ್ಟಿಸಿಕೊಳ್ಳಬಾರದು ಅಂತೇನಿಲ್ಲವೋ ಆದರೆ ನನಗೆ ವಯಸ್ಸಾಯ್ತು ನೋಡು ಯಥಾರ್ಥ ಈ ಇಳಿವಯಸ್ಸಿನಲ್ಲಿ ಪದೇ ಪದೇ ತಣ್ಣೀರು ಸ್ನಾನವು ಆರೋಗ್ಯಕ್ಕೆ ವ್ಯತಿರಿಕ್ತ ಅಲ್ಲೇವೇನಪ್ಪಃ ಎಂಬ ಮದ್ವಾಚಾರ್ಯರ ನಯವಾದ ಮಾತುಗಳಿಂದಲೇ ಜಾತಿ ವ್ಯವಸ್ಥೆಯ ಮಡಿವಂತಿಕೆಯನ್ನು ಹೇಳುತ್ತಾರೆ. ಅಲ್ಲದೆ ಭಾಷೆಯ ದೃಷ್ಟಿಯಿಂದ ಶ ಷ ಕಾರ ಉಚ್ಚಾರಣೆ ಬಂದು ದಲಿತರಿಗೆ ಎಂಬ ಮೇಲ್ವರ್ಗದ ಬರಹಗಾರರ ವಾದಕ್ಕೆ ತಿರುಗಿ ಪ್ರಾದೇಶಿಕ ಭಾಷೆಯಲ್ಲಿ ಕುಸುಮಬಾಲೆಯನ್ನು ರಚಿಸಿ ಬೌದ್ಧಿಕ ವ್ಯಕ್ತಿಗಳೆನಿಸಿಕೊಂಡಿದ್ದ ವಿದ್ವಾಂಸರು ಕೂಡ ಗ್ರಾಂಥಿಕ ಕನ್ನಡಕ್ಕೆ ಅನುವಾದ ಮಾಡಿ ಎಂದು ದಲಿತರ ಭಾಷೆಯನ್ನು ಅರಗಿಸಿಕೊಳ್ಳದ ಉಚ್ಚರಿಸಲಾರದವರಿಗೆ ಒಂದು ಭಾಷಿಕ ಸವಾಲನ್ನು ಒಡ್ಡಿದ್ದಾರೆ ಎಂದೆನಿಸುತ್ತದೆ.

'ಶಿವಾಚಾರದವರ ಅಂಗಡಿ ಮುಂದಕ ಚನ್ನನ ಅಪ್ಪ ಬಂದು ನಿಲ್ಲುತ್ತಲೆ ಅಲ್ಲಿ ಕುಂತುನಿಂದ ಶಿವಾಚಾರದವರು ಬನ್ನಿ ಬುದ್ಯೋ ಬನ್ ಬನ್ನಿ ಸೋಮೋ ಎಂದು ನಗುಸುವಾಗ ಚನ್ನನ ಅಪ್ಪನಿಗೆ ಅರ್ಥವಾಗದೆ ಇದ್ಯಾಕ ದಣಿಗಳ ಈ ಥರವಾದ ಮಾತ್ಗಳೂ... ಅಂತ್ಲೆ ಆಗ ಇನ್ಯಾನ ಮಾಡೋದು ಬುದ್ಯೋ ನಿಂ ಜಾತ್ಯವರೆಲ್ಲಾ ನಾಳಕಿಂದ್ಲಿಯ ಜೀತ ಬುಟ್ ಬುಟ್ಟಾರಂತಲ್ಲಾ' ಎಂಬ ಮಾತುಗಳು ದಲಿತರನ್ನು ಜೀತಗಾರಿಕೆಯಲ್ಲಿ ಮುಂದುವರೆಸುವಂತೆ ಕಾಯ್ದುಕೊಳ್ಳುವ ಪ್ರಯತ್ನ ಮಾಡುತ್ತಾರೆ ಎಂದೆನಿಸುತ್ತದೆ.

ಚೋಮನು ಇಂತ ವ್ಯವಸ್ಥೆಗೆ ಜೀತಗಾರಿಕೆಗೆ ಒಳಗಾದವನೆ. ಆದರೆ ಪ್ರತಿಭಟಿಸಲು ಅಸಕ್ತನಾಗಿದ್ದ ಜೀತ ವಿಮುಕ್ತಿ ಕಾನೂನು ಜಾರಿಯಲ್ಲಿದ್ದರಿಂದ ಜೀತಗಾರಿಕೆಯನ್ನು ಪ್ರಶ್ನಿಸುವ ಅದನ್ನು ಬಿಡುವ ಶೈಕ್ಷಣಿಕವಾಗಿ ಮೇಲೆ ಬರುವುದರ ಮೂಲಕ ಮೀಸಲಾತಿಯ ಅವಕಾಶ ಪಡೆದು ಸಮಾನತೆಯ ಬದುಕನ್ನು ಕಟ್ಟಿಕೊಳ್ಳಬೇಕೆಂಬ ಹೆಬ್ಬಯಕೆ ದೇವನೂರದಾಗಿದೆ. ಜಾತಿ, ಭಾಷೆ, ಕಾಲಘಟ್ಟ, ಸಾಹಿತ್ಯ ರಚನಾಕ್ರಮ, ಸನ್ನಿವೇಶ ಸಂದರ್ಭಗಳಲ್ಲಿ ಎರಡು ವಿಭಿನ್ನ ಪರಿಸರದಿಂದ ಬಂದ ಕಾರಂತ ಮತ್ತು ದೇವನೂರು ಮಹಾದೇವರು ಹೀಗೆ ತಮ್ಮ ಕೃತಿಗಳಲ್ಲಿ ದಲಿತ ಸಂವೇಧನೆಯನ್ನು ಹಿಡಿದಿದ್ದಾರೆ ಎಂಬುದು ಕಂಡುಬರುತ್ತದೆ. ಪ್ರಗತಿಪರವಾಗಿ ದೇವನೂರರು ನಿಂತಿರೆ ಪ್ರಗತಿ ವಿರೋಧಿಯಾಗಿ ಆದರೆ ವಾಸ್ತವವೆನ್ನುವಂತೆ ಕಾರಂತರು ದಲಿತರ ಚಿತ್ರಣವನ್ನು ನೀಡುತ್ತಾರೆ. ಬದಲಾದ ಎರಡು ಕಾಲಘಟ್ಟಗಳಲ್ಲಿ ದಲಿತ ಸ್ವರೂಪವನ್ನು ಹಿಡಿದಿಡುವಲ್ಲಿ ಈ ಇಬ್ಬರು ಕೃತಿಕಾರರು ಶ್ರಮಿಸಿದರು. ದಲಿತ ಸಮುದಾಯದಿಂದ ಬಂದ ದೇವನೂರರಲ್ಲಿ ನಿಜವಾದ ದಲಿತ ಸಂವೇಧನಯ ಅಂತಸ್ಸತ್ವ ಅನಾವರಣಗೊಂಡಿದೆ.

## ಕೊನೆ ಟಿಪ್ಪಣಿ :

1) ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ – ಅರವಿಂದ ಮಾಲಗತ್ತಿ
– ಕನ್ನಡ ಸಾಹಿತ್ಯ ಪರಿಷತ್ –2003 ಪುಟ –3

2) ಅಂಬೇಡ್ಕರ್/ ಮನುವಾದ – ಮ.ನ. ಜವರಯ್ಯ,
– ಬಹುಜನ ಮಾಧ್ಯಮ ಕೇಂದ್ರ, ಮೈಸೂರು –2007 ಪುಟ –193

3) ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ – ಮ.ನ. ಜವರಯ್ಯ
– ಸಿದ್ದಾರ್ಥ ಗ್ರಂಥಮಾಲೆ ಪುಟ –263

4) ಚಾತುರ್ವರ್ಣ ಧರ್ಮದರ್ಶನ – ಕುಮಾರ ಕಕ್ಕಯ್ಯ ಪೋಳ
– ಲೋಹಿಯಾ ಪ್ರಕಾಶನ ಪುಟ –511

5) ಶಿವರಾಮ ಕಾರಂತ ಎರಡು ಅಧ್ಯಯನಗಳು – ಟಿ.ಪಿ. ಅಶೋಕ,
– ಪ್ರಕಾಶನ : ಅಕ್ಷರ ಪ್ರಕಾಶನ – 1992 ಪುಟ –84

6) ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ – ಅರವಿಂದ ಮಾಲಗತ್ತಿ
– ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು –2003 ಪುಟ –125

7) ಚೋಮನದುಡಿ – ಶಿವರಾಮಕಾರಂತರು
– ಎಸ್.ಬಿಸ್.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂ, – 2010 ಪುಟ –40

8) ಚೋಮನದುಡಿ – ಶಿವರಾಮಕಾರಂತರು
– ಎಸ್.ಬಿಸ್.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂ, – 2010 ಪುಟ –101

9) ಅಂಬೇಡ್ಕರ್ / ಮನುವಾದ – ಮ.ನ. ಜವರಯ್ಯ
– ಬಹುಜನ ಮಾಧ್ಯಮ ಕೇಂದ್ರ, ಮೈಸೂರು – 2007 ಪುಟ –229

10) ಅದೇ ------------”---------- ಪುಟ –216

11) ಚೋಮನದುಡಿ – ಶಿವರಾಮಕಾರಂತರು
– ಎಸ್.ಬಿಸ್.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂ, – 2010 ಪುಟ –12

12) ಚಾತುರ್ವರ್ಣ – ಧರ್ಮದರ್ಶನ – ಕುಮಾರ ಕಕ್ಕಯ್ಯ ಪೋಳ
– ಲೋಹಿಯ ಪ್ರಕಾಶನ ಪುಟ –2

13) ಅದೇ ------------”---------- ಪುಟ –149

14) ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ – ಅರವಿಂದ ಮಾಲಗತ್ತಿ
– ಕನ್ನದ ಸಾಹಿತ್ಯ ಪರಿಷತ್ತು, ಬೆಂಗಳೂರು ಪುಟ –25

15) ಚೋಮನದುಡಿ – ಶಿವರಾಮಕಾರಂತರು

– ಎಸ್.ಬಿಸ್.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂ, – 2010 ಪುಟ –20

16) ಅದೇ ------------"---------- ಪುಟ –44

17) ಅದೇ ------------"---------- ಪುಟ –94

18) ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ – ಅರವಿಂದ ಮಾಲಗತ್ತಿ

– ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ಪುಟ – 18

19) ಕುಸುಮ ಬಾಲೆ – ದೇವನೂರು ಮಹಾದೇವ

– ಅಭಿನವ ಪ್ರಕಾಶನ, ಬೆಂಗಳೂರು –2002 ಪುಟ – 96

20) ಅದೇ ------------"---------- ಪುಟ –77

21) ಅದೇ ------------"---------- ಪುಟ –115

22) ಅದೇ ------------"---------- ಪುಟ –125

23) ಚಾತುರ್ವರ್ಣ ಧರ್ಮದರ್ಶನ ಕುಮಾರ ಕಕ್ಕಯ್ಯ ಪೋಳ

– ಲೋಹಿಯಾ ಪ್ರಕಾಶನ ಪುಟ – 127

## ‘ಚೋಮದುಡಿ’ ಮತ್ತು ‘ಕುಸುಮ ಬಾಲೆ’ ಕಾದಂಬರಿಗಳಲ್ಲಿನ ಜಮೀನ್ದಾರಿ ಪದ್ಧತಿ

ಜಗತ್ತಿನಲ್ಲಿ ಬಂಡವಾಳಶಾಹಿ ವ್ಯವಸ್ಥೆ ಹುಟ್ಟುವ ಮೊದಲು ಜಮೀನ್ದಾರಿ ವ್ಯವಸ್ಥೆ ಭಾರತದಲ್ಲಿದದ್ದು ಜಾತಿಬದ್ಧದಾಗ ಜಮೀನ್ದಾರಿ ವ್ಯವಸ್ಥೆ ಕರ್ನಾಟಕದ ಬುಡಕಟ್ಟು ಕುಲ ಸಮಾಜಗಳು ನಾಶವಾಗುತ್ತಾ ಜಾತಿಬದ್ಧವಾದ ಜಮೀನ್ಧಾರಿ ವ್ಯವಸ್ಥೆಯ ಸಮಾಜಗಳಾಗಿ ರೂಪುಗೊಂಡಿರುವುದು ಎದ್ದು ಕಾಣುವ ಸತ್ಯ.

ಭೂ ಮಾಲೀಕರು ಅಗ್ರಹಾರಗಳು ಮಠಗಳು ದೇವಾಲಗಳು, ವ್ಯಾಪಾರಸ್ಥರು ಕರ್ನಾಟಕದ ಜಮೀನ್ದಾರಿ ವ್ಯವಸ್ಥೆಯ ಕಾಲದ ಶೋಷಕ ವರ್ಗ ಕುಶಲಕರ್ಮಿಗಳು, ರೈತರು, ಜೀತದಾಳುಗಳು ಶೋಷಿತ ವರ್ಗಗಳು ಇವರೆಲ್ಲರೂ ಸಾಮಾನ್ಯವಾಗಿ ಮಧ್ಯಮ ಮತ್ತು ಕೆಳಜಾತಿಗಳ ಜನ ವರ್ಗಗಳೆಲ್ಲವೂ ‘ಜಾತಿ’ಯ ಬಿಗಿ ರಚನೆಗಳಲ್ಲಿ ಬಂದನಕ್ಕೊಳಗಾಗಿದ್ದವು ಎಂಬುದುದೇ ಭಾರತೀಯ ವಿಶೇಷತೆ.

ಹೀಗೆ ಜಾತಿಯ ಬಿಗಿ ರಚನೆಗಳಲ್ಲಿ ಬಂಧನಕ್ಕೋಳಗಾದ ಸಮುದಾಯಗಳಲ್ಲಿ ಒಂದೇ ವೃತ್ತಿಯನ್ನು ಮಾಡುವ ಒಂದೇ ಜಾತಿಯ ಸಮುದಾಯಗಳು ಸಣ್ಣ ಕಾರಣಗಳಿಗಾಗಿ ವಿಭಜಿತವಾದುದ್ದು ಗಮನಾರ್ಹ. ಹೀಗೆ ವಿಭಜಿತವಾದ ಜಾತಿಗಳಲ್ಲಿ ಅಸ್ಪೃಶ್ಯರೆನಿಸಿಕೊಂಡ ಹೊಲೆಯ ಸಮುದಾಯದಲ್ಲಿ ಅತ್ಯಂತ ಕೀಳು ವರ್ಗವೆನಿಸಕೊಂಡ ಮಾರಿಹೊಲೆಯ ಜಾತಿಗೆ ಸೇರಿದವನು ಕಾರಂತರ “ಚೋಮನದುಡಿಯ” ಚೋಮ.

ಕಾರಂತರೇ ಹೇಳುವಂತೆ “ದ.ಕ.ಜಿಲ್ಲೆಯಲ್ಲಿ ಅಸ್ಪೃಶ್ಯರಾದ ಹೊಲೆಯರ ಸಮುದಾಯದಲ್ಲಿ ಮೇರ, ಬೈರ, ಅಜಿಲ, ಮಾರಿಯ ಎಂಬ ನಾಲ್ಕು ಬೇರೆ ಬೇರೆ ವಿಭಾಗಗಳಿವೆ. ಅವರಲ್ಲಿ ಮೇರರು ಸಾಗುವಳಿಯನ್ನು ಮಾಡಲು ಸಾಧ್ಯವಿದೆ. ಆದರೆ ಸಮಾಜದಲ್ಲಿ ತೀರಾ ಕೆಳವರ್ಗದವರು ಎನಿಸಿಕೊಂಡಿದ್ದ ಮಾರಿಹೊಲೆಯ ವರ್ಗಕ್ಕೆ ಈ ಅವಕಾಶವನ್ನು ಸಮಾಜ ಕೊಡುತ್ತಿರಲಿಲ್ಲ.

ಚೋಮನಿಗೆ ಉಳುಮೆ ಮಾಡಲು ಭೂಮಿ ಸಿಗದಿರುವುದಕ್ಕೆ ಒಂದೆಡೆ ಆತನಜಾತಿ ಕಾರಣವಾದರೆ ಇನ್ನೊಂದೆಡೆ ಪ್ರಮುಖವಾಗಿ ಜಮೀನ್ದಾರಿ ವ್ಯವಸ್ಥೆ ಕಾರಣ ಜನ ಶ್ರೀಮಂತರಲ್ಲಿ ಕ್ರೂಢಿಕರನಗೊಂಡ ಈ ಭೂಮಿಯ ಒಡೆತನ ಸಮಾನವಾಗಿ ಹಂಚಿಕೆಯಾಗದೆ ದುಡಿಯುವ ವರ್ಗದ ಎಷ್ಟೋ ಜನರು ಭೂಮಿ ಇಲ್ಲದೆ, ಭೂಮಿ ಹೊಂದಿರುವ ಒಡೆಯರ ಜೀತದಾಳುಗಳಾಗಿ ಜೀವನ ನಡೆಸುತ್ತಿದ್ದಾರೆ ಇಂತಹ ಒಂದು ಕುಟುಂಬ ಚೋಮನದ್ದು.

"ಮನುಧರ್ಮಶಾಸ್ತ್ರದ 10–129 ಶ್ಲೋಕದಲ್ಲಿನ ವಿವರಣೆಯನ್ನು ಅಂಬೇಡ್ಕರ್ ಗುರುತಿಸುವಂತೆ ನಾ.ನ. ಜವರಯ್ಯರವರು ಈ ಕೆಳಕಂಡಂತೆ ಪ್ರಸ್ಥಾಪಿಸಿದ್ದಾರೆ ಶೂದ್ರನಿಗೆ ಹಣ, ಆಸ್ತಿ ಸಂಪಾದಿಸುವ ಶಕ್ತಿ ಇದ್ದರೂ ಅವನು ಹಣ ಸಂಪಾದನೆ ಮಾಡಬಾರದು ಕಾರಣ ಗುಲಾಮನಾದ ಶೂದ್ರನು ಹಾಗೆ ಆಸ್ತಿಗಳಿಸಿದರೆ ಹೆಮ್ಮೆ ಪಡುತ್ತಾನೆ. ಅಂದರೆ ಆ ಬಗೆಯ ಗರ್ವದಿಂದ ಮೇಲ್ವರ್ಗದವರನ್ನು ಬ್ರಾಹ್ಮಣರನ್ನು ತಿರಸ್ಕಾರ ಮಾಡುವುದರ ಮೂಲಕ ಅವರಿಗೆ ನೋವನ್ನುಂಟು ಮಾಡುತ್ತಾನೆ. ಪ್ರಾಚೀನ ಕಾಲದಿಂದಲೂ ಮನುಧರ್ಮಶಾಸ್ತ್ರದ ನಿಯಮಗಳು ದಲಿತರಿಗೆ ಯಾವ ಅವಕಾಶಗಳೂ ಸಿಗದಂತೆ, ಶಕ್ತಿ ಇದ್ದರೂ ಆಸ್ತಿ ಹಣ ಸಂಪಾದಿಸದಂತೆ ಕಾಯ್ದುಕೊಂಡು ಬಂದಿರುವ ವ್ಯವಸ್ಥೆಯ ಕಾರಣದಿಂದಲೇ ಚೋಮನಂತವರಿಗೆ ಆಸ್ತಿ ಸಂಪಾದಿಸುವ ವ್ಯವಸಾಯ ಮಾಡುವ ಅದಮ್ಯ ಆಸೆಯನ್ನೂ ಪೂರೈಸಿಕೊಳ್ಳಲು ವಿಫಲನಾಗುತ್ತಾನೆ. ಆದರೂ ಸಂಕಪ್ಪಯ್ಯನವರನ್ನು 'ಧನಿಗಳಿಗೆ ಇಷ್ಟೆಲ್ಲ' ಆಳು ಮಕ್ಕಳಿದ್ದಾರೆ ಈ ಚೋಮನಿಗೂ ಒಂದು ಗಾಳುಕೊಂಪೆಯನ್ನು ಕೊಟ್ಟಿದ್ದರೆ ನಿಮ್ಮ ಹೆಸರು ಹೇಳಿ ಬದುಕುತ್ತಿದ್ದ ಎಂಬ ಮಾತು ಕೇಳಿ ಸಂಕಪ್ಪಯ್ಯನವರಿಗೆ ಆಶ್ಚರ್ಯವಾಗುತ್ತದೆ. ಸಹಜವಾಗಿ ಪ್ರಾಚೀನ ಕಾಲದಿಂದಲೂ ವ್ಯವಸ್ಥೆಯ ಬಂಧನಕ್ಕೊಳಗಾದ ದಲಿತರು ಬೇಸಾಯ ಮಾಡದಿದ್ದರಿಂದ ಸಹಜವಾಗಿ ಸಂಕಪ್ಪಯ್ಯನವರು "ಹೊಲೆಯರು ಬೇಸಾಯಗಾರರಾಗುವುದುಂಟೇ" ಎಂಬ ಪ್ರಶ್ನೆಯನ್ನು ಹಾಕಿಕೊಳ್ಳುತ್ತಾರೆ. ಅವರಲ್ಲಿ ಬಂಜರು ಬಿದ್ದ ಎಷ್ಟೋ ಜಮೀನುಗಳಿದ್ದವು ಅದನ್ನೇಕೆ ಅವನು ಸಾಗುವಳಿ ಮಾಡಬಾರದೆಂದು ತೋಚಿದುದರಿಂದ ಅದೇ ವಿಷಯವನ್ನು ಪ್ರಸ್ತಾಪಿಸಲು ಕಾದುಕುಳಿತ ಧನಿಗಳು ಮನೆಯ ಒಳಗೆ ಹೋಗಿ ತಿರುಗಿ ಬಂದು "ಚೋಮ ಇದುವರೆಗೆ ನಮ್ಮ ಹಿರಯರು ನಿಮ್ಮವರಿಗೆ ಗೇಣಿಗೆ ಗದ್ದೆ ಕೊಟ್ಟದ್ದಿಲ್ಲ ಈಗ ಹಾಗೆ ಕೊಡಲಿಕ್ಕೆ ಬರುವ ಹಾಗೆ ಇಲ್ಲ" ಎಂದರು ವ್ಯವಸ್ಥೆಯ ಪ್ರತಿರೂಪವಾಗಿರುವ ಅವರ ತಾಯಿಕೂಡ "ಅಬ್ಬಾ ಈ ಹೊಲೆಯರಿಗೆ ಬಂದ ಸೊಕ್ಕೇ ಎಂದ ಶಪಿಸುತ್ತಿದ್ದಳು" ಹೀಗೆ ವ್ಯವಸ್ಥೆಯನ್ನು ಯತಾಸ್ಥಿತಿಯಂತೆ ಕಾಯ್ದುಕೊಳ್ಳುವಲ್ಲಿ ಸಂಕಪ್ಪಯ್ಯನ ತಾಯಿಯಂತಹ ಮೂಲಭೂತವಾದಿ ಮನಸ್ಸುಗಳು ಸದಾಜಾಗೃತವಾಗಿರುತ್ತದೆ.

"ಬಹಳ ಹಿಂದಿನಿಂದಲೂ ನಡೆದು ಬಂದ ಜಾತಿವ್ಯವಸ್ಥೆ ಎಂಥಹ ಪ್ರತಿಭಟನೆಯನ್ನೇ ಆದರೂ
ಂಗಿ ನೀರು ಕುಡಿಯಬಲ್ಲದು. ಜಮೀನ್ದಾರಿ ಗೇಣಿದಾರರ ನಡುವೆ ನಡೆಯುವ ಹೋರಾಟದಲ್ಲಿ ಯಾವುದೇ
ದು ವರ್ಗದಲ್ಲಿ ಒಂದು ಗುಂಪಿನ ಜನ ಬಹಳವಾಗಿದ್ದರೆ ಅದು ಕೋಮುಗಲಬೆಯಾಗಿ ಮಾರ್ಪಾಡಾಗುವ
ವಾಡ ಇಲ್ಲಿಯದು ಆದರೆ ಸ್ವಾತಂತ್ರೋತ್ತರ ಕಾಲದ 70ರ ದಶಕದ ಸಂದರ್ಭದಲ್ಲಿ ಸಾದ್ಯವಾಯಿತೇ ವಿನಃ
ತಂತ್ರ ಪೂರ್ವದಲ್ಲಲ್ಲ.

ಕುಸುಮ ಬಾಲೆಯ ಗಾರ್‌ಸಿದ್ಮಾವನು ಎಳೆನೀರನ್ನು ಕದ್ದು ಶಿಕ್ಷೆ ಅನುಭವಿಸುವಾಗ ದಲಿತ ಸಂಘರ್ಷ
ಮಿತಿ ನೆರವಿಗೆ ಬರುವುದು ಹಾಗೂ ಜೀತ ವಿಮೋಚನಾ ಚಳುವಳಿಯ ಕುರಿತಾದ ಪ್ರಚಾರದಂತಹ ಸಂದರ್ಭಗಳು
ಮೀನ್ದಾರಿ ವ್ಯವಸ್ಥೆಯನ್ನು ವಿರೋಧಿಸುವ ಸಂದರ್ಭಗಳಾಗಿ ಕಂಡುಬರುತ್ತವೆ. ಸ್ವಾತಂತ್ರ್ಯದ ನಂತರ ಈ
ತಿಯ ಬದಲಾವಣೆಗಳನ್ನು ಕಾಣಲು ಸಾಧ್ಯವಾಗಿದೆ.

ಚೋಮನದುಡಿಯು ಮಾನವೀಯ ಸಂವೇದನೆಯ ದೃತಿ ಎಂದು ಹೆಸರು ತಂದುಕೊಡುವುದರ
ದಲು 'ಬಂಡಾಯ ಕಾದಂಬರಿ' ಪ್ರಗತಿ ವಿರೋದಿ ಕಾದಂಬರಿ ಎಂಬ ಹೆಸರು ತಂದುಕೊಟ್ಟಿತು ಆದರೆ
ಕ್ಷ್ಮವಾಗಿ ನೋಡಿದರೆ ಚೋಮನದುಡಿ ಮಾನವೀಕರಣದ ಪರವಾಗಿನಿಂತ ಬಹುದೊಡ್ಡ ಮಹತ್ವದ ಅತಿ
ಕ್ಕ ಕೃತಿ ಎನ್ನುವುದು ಗೋಚರವಾಗುತ್ತದೆ. "ಹೊಲೆಯರಿಗೆ ಉಳುಮೆ ಮಾಡುವ ಹಕ್ಕಿಲ್ಲ" ಎಂಬ ಸಾಂಪ್ರದಾಯಿಕ
ಂಬಿಕೆಯನ್ನು 'ಅಮಾನವೀಯ' ಎಂದು ಹೇಳುವಲ್ಲಿ ಕೃತಿ ಯಶಸ್ವಿಯಾದರೂ ಸಾಧಿಸುವಲ್ಲಿ ವಿಫಲವಾಗುತ್ತದೆ.
ೋಮ ರಾತ್ರಿಯ ಊಟಕ್ಕೆ ಬೇಕಾದ ಗಂಜಿಯನ್ನು ಹಗಲೆಲ್ಲ ದುಡಿದೇ ಸಂಪಾದಿಸಬೇಕು. ಒಂದು ವೇಳೆ
ಚ್ಚು ಬೇಕಿದ್ದರೆ ದನಿಯರಲ್ಲಿ ಬೇಡಿ ತರಬೇಕು ಅದನ್ನು ಮುಂದಿನ ದಿನಗಳಲ್ಲಿ ತೀರಿಸಬೇಕು ತಿನ್ನುವವರ
ಂಖ್ಯೆ 6. ದುಡಿಯುವವರ ಸಂಖ್ಯೆ ನಾಲ್ಕು ಬಡತನ ರೇಖೆಯಿಂದ ನೋಡಿದರೆ ಬಡತನ ಚೋಮನಿಗಿಲ್ಲ
ದರೆ ದುಡಿಸಿಕೊಳ್ಳುವ ದಣಿಗಳು ಅವನ ಶ್ರಮಕ್ಕೆ ಕೊಡುವ ಕೂಲಿ ಮಾತ್ರ ಕಡಿಮೆ.

ದುಡಿಯುವ ವರ್ಗದ ಶ್ರಮವನ್ನು ಅವರ ಬೆವರಿನ ಫಲವನ್ನು ಶ್ರೀಮಂತರಾದ ಉಳ್ಳವರು ಯಾವ
ಮವೂ ಇಲ್ಲದೆ ಅನುಭವಿಸುತ್ತಿದ್ದಾರೆ. ದುಡಿಯುವ ವರ್ಗಕ್ಕೆ ಸರಿಯಾದ ಶ್ರಮಕ್ಕೆ ತಕ್ಕ ಪ್ರತಿಫಲ ನೀಡದೆ
ವರನ್ನು ಬಡತನದಲ್ಲಿಟ್ಟು ಅವರ ಶ್ರಮವನ್ನು ಇವರ ಸುಖಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ. ಜಮೀನ್ದಾರರ
ತ್ತಿರ ಭೂಮಿ ಇದ್ದು ಭೂಮಿ ಇಲ್ಲದ ವರ್ಗಗಳು ದುಡಿಮೆ ಮಾಡಲು ಹೋಗುವ ಅನಿವಾರ್ಯತೆಯನ್ನು
ಳಸಿಕೊಳ್ಳುತ್ತಿರುವ ಮೇಲ್ವರ್ಗಗಳು ಶ್ರಮಿಕವರ್ಗವನ್ನು ತಮ್ಮ ಅಡಿಯಾಳುಗಳನ್ನಾಗಿ ಮಾಡಿಕೊಂಡಿರುವುದನ್ನು
ಾಣಬಹುದು.

ಚೋಮ ಉಳುಮೆ ಮಾಡುವ ಕನಸಿನಿಂದಲೇ ಕಾಡಿನಲ್ಲಿ ದಾರಿ ತಪ್ಪಿ ಬಂದ ಕರುಗಳನ್ನು ಪ್ರೀತಿಯಿಂದ ಎತ್ತುಗಳನ್ನಾಗಿ ಮಾಡಿದ್ದ ದನಿಯರಾದ ಸಂಕಪ್ಪಯ್ಯನವರು ಎತ್ತುಗಳನ್ನು ಉಳುಮೆಗೆ ಕಟ್ಟು ಎಂದು ಿತ್ತಾರೆ. ಇಲ್ಲವಾದರೆ ಕ್ರಯಕ್ಕಾದರೂ ಕೊಡು ಎಂದು ಕೇಳುವುದು, ಮಾಪಿಳ್ಳೆ ಸಾಹುಕಾರ ಹೆಚ್ಚು ಬೆಲೆ ುವ ಎತ್ತುಗಳನ್ನು "ನಿನಗೇಕೆ ಚೋಮ ಇವು ಈ ಕರುಗಳನ್ನು ನನಗೆ ಕೊಡು ನಿನಗೆ 10 ರೂಪಾಯಿ ಿಯಿಂದ ನೀಡುತ್ತೇನೆ" ಎಂದು ಹೇಳುವಾಗ 30 ರೂ. ಗಿಂತಲೂ ಹೆಚ್ಚು ಬೆಲೆಯನ್ನು ಕಳ್ಳ ಕೊಟ್ಟಾನು ್ತಾನೆ ಚೋಮ ಆದರೆ ಮಾಪಿಳ್ಳೆ ಸಾಹುಕಾರ 10 ರೂ. ಗಿಂತ ಹೆಚ್ಚು ಕೊಡಲಾರ. ದಲಿತ ಎನ್ನುವ ಒಂದೇ ಣಕ್ಕೆ ಆತನಲ್ಲಿರುವ ಬೆಲೆಬಾಳುವ ವಸ್ತುವನ್ನು ಅಲ್ಪಸ್ವಲ್ಪ ಹಣಕೊಟ್ಟೋ ಅಥವಾ ದಣಿಗಳು ಎಂಬ ಧಯೆ ೇರಿಸಿಯೋ ತಮ್ಮದಾಗಿಸಿಕೊಳ್ಳುವ ನಯವಂಚಕತನಗಳು ದಲಿತರನ್ನು ಸ್ವತಂತ್ರರಾಗಲು ಬಿಡದೇ ಬಡತನದಲ್ಲಿಯೇ ಾಗಿ ಅವರು ಜೀವನ ಸವೆಸಬೇಕು ಎನ್ನುವ ಉದ್ದೇಶಗಳು ಇವರ ವಸ್ತುಗಳಿಗೆ ಬೆಲೆ ನಿಗಧಿ ಮಾಡುವಾಗಲೂ ಮೆ ಬೆಲೆ ಕೊಡುವುದನ್ನು ಕಾಣಬಹುದು.

ಚೋಮನ ಜೀವನದ ಆಸೆ ಉಳುವೆ ಮಾಡುವ ಉದ್ದೇಶದಿಂದ ಕರುಗಳು ಎತ್ತಗಳಾದಗ ದನಿಯರನ್ನು ್ತೆ ಕೇಳುತ್ತಾನೆ ಎಂದು ಒಂದು ಮುಡಿ ಗದ್ದೆಯನ್ನಾದರೂ ಗೇಣಿಗೆ ಕೇಳುತ್ತೇನೆ ಎನ್ನುವ ಆಸೆಯನ್ನು ಬೆಳ್ಳಿಯ ಂದಿಟ್ಟಾಗ ಬೆಳ್ಳಿ "ಈ ಜಾತಿ ವರ್ಗದ ವ್ಯವಸ್ಥೆಯ ಸೂಕ್ಷ್ಮತೆಯನ್ನು ಅರಿತಿದ್ದರಿಂದಲೂ "ನೀನು ದನಿಯರೊಂದಿಗೆ ಯಿತೆರೆದು ಮಾರ್ಯಾದೆಯನ್ನು ಕಳೆದುಕೊಳ್ಳಬೇಡ" ಎಂದು ಇದುವರೆಗೂ ಚೋಮನ ಹಿರಿಯರಲ್ಲಿ ಬೇಸಾಯ ಡಿದವರಿಲ್ಲ ಚೋಮನ ಒಡೆಯರಿಗೆ ಯಾವ ಒಬ್ಬ ಹೊಲೆಯರ ಒಕ್ಕಲೂ ಇಲ್ಲ ಹೊಲೆಯರು ನೇಗಿಲು ಿದರೆ ಪ್ರಳಯವೇ ಆದೀತೆಂದು ತಿಳಿಯುವರು" ಎಂದು ಆಗದ ಕೆಲಸವನ್ನು ಕೈಬಿಡು ಎನ್ನುತ್ತಾಳೆ. ಸ್ವಾತಂತ್ರೋತ್ತರ ದರ್ಭದಲ್ಲಿ ಚೋಮ ಬದುಕಿದ್ದರೆ ಉಳುವವನೆ ಭೂಮಿಯ ಒಡೆಯ ಎಂಬ ಭೂಸುಧಾರಣಾ ಕಾಯ್ದೆಯಡಿ ಮೀನನ್ನು ಪಡದೇ ತೀರುತ್ತಿದ್ದನೇನೋ ಇಲ್ಲವೆಂದರೆ ಸರ್ಕಾರಿ ದರಕಾಸ್ಥಿ ಜಮೀನನ್ನು ಪಡೆದು ಬೇಸಾಯ ಡಿ ಆನಂದ ಪಡುತ್ತಿದ್ದಾನೇನೋ ಆದರೆ ಚೋಮ ಬದುಕಿದ್ದ ಕಾಲದಲ್ಲಿ ಇದಾವುದಕ್ಕೂ ಅವಕಾಶವಿಲ್ಲದಿರುವುದು ಂದಿನ ದಲಿತರ ಸ್ಥಿತಿಯನ್ನು ವಿವರಿಸುತ್ತದೆ.

ಹಿಂದೂ ಜಮೀನ್ದಾರಿ ವ್ಯವಸ್ಥೆಯಲ್ಲದೆ ವಸಾಹತುಶಾಹಿ ವ್ಯವಸ್ಥೆಯೂ ಕೂಡ ಹೊರಗಿನಿಂದ ಬಂದ ವಸ್ಥೆಯೂ ಇದನ್ನೇ ಅನುಸರಿಸಿ ಜಮೀನ್ದಾರಿ ವ್ಯವಸ್ಥೆಯ ಇನ್ನೊಂದು ಮುಖವಾಗಿ ಕಂಡುಬರುತ್ತದೆ. ಹಿಂದೂ ಮೀನ್ದಾರಿ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಗಮನಿಸಿದ ಇವರು ಇಲ್ಲಿ ಶೋಷಣೆಗೊಳಗಾದ ಸಮುದಾಯಗಳನ್ನು ತ್ತಪ್ಪು ಶೋಷಣೆಗೆ ಒಳಗುಮಾಡಿದ್ದು ದುರಂತ "ಚೋಮ ಸಾಲ ಮಾಡಿ ಮಜಾ ಮಾಡುವ ಸಂಪ್ರದಾಯದವನಲ್ಲ ನನ ಜೀವನದಲ್ಲಿ ಒಂದೇ ಒಂದು ಬಾರಿ ಸಾಲ ಮಾಡುವ ಸಂದರ್ಭ ಬರುತ್ತದೆ.

ಸೇರೆಗಾರ ಮನ್ವೇಲ ತೋಟದ ದೊರೆಗಳಿಂದ ಪ್ರೇರೇಪಿಸಿ ಚೋಮ ತನ್ನ ಹೆಂಡತಿ ಸಾಯುವ ವರ್ಷ
ೀಪದ ಕಾಫಿ ತೋಟಕ್ಕೆ ಹೋಗಿ ಸಾಲ ಪಡೆದ 4–5 ರೂಪಾಯಿ ಈಗ ಚಕ್ರಬಡ್ಡಿ ಸಮೇತ 20 ರೂಪಾಯಿಗೆ
ದು ನಿಂತಿತ್ತು ಎಂದು ಸುಳ್ಳು ಲೆಕ್ಕ ತೋರಿಸುವುದರ ಮೂಲಕ ಶೋಷಣೆಗೆ ಒಳಪಡಿಸುವುದನ್ನು ಕಾಣಬಹುದು.
ರತೀಯ ಜಾತಿ ವ್ಯವಸ್ಥೆಯ ಸಂದರ್ಭದಲ್ಲಿ ಪರಂಪರಾಗತ ಮೌಲ್ಯಗಳಿಗೆ ಮಾತ್ರ ಮುಖಾ ಮುಖಿಯಾಗದೆ
ಾಹತುಶಾಹಿ ಮೌಲ್ಯಗಳಿಗೂ ಮುಖಾಮುಖಿಯಾಗಿಸಿದೆ. ಭಾರತೀಯ ಜಾತಿ ವ್ಯವಸ್ಥೆಯು ವಸಾಹತುಶಾಹಿ
ುನಿಕತೆಯ ಮೌಲ್ಯಗಳನ್ನು ಜೀರ್ಣಿಸಿಕೊಳ್ಳುತ್ತಲೆ ಇತರ ಸಮುದಾಯಗಳ ನಿಜವಾದ ಸಮಸ್ಯೆ ಭೂಮಿಯ
ುಸ್ಯೆ ಶೋಷಣೆಯ ಸಮಸ್ಯೆಯೆ" ಎಂಬ ಡೋಮಿನಿಕ್ ಅವರ ಅಭಿಪ್ರಾಯವನ್ನೆ ಒಪ್ಪಬಹುದಾಗಿದೆ.

ಚೋಮನ ಸಾಲ ತೀರಿಸಲು ಹೋದ ಚನಿಯ ಮತ್ತು ಗುರುವರು ಸಾಲವನ್ನು ಇನ್ನಷ್ಟು ಹೆಚ್ಚು
ಡಿದ್ದಾರೆಂಬ ಅಪವಾದಕ್ಕೆ ಒಳಗುಮಾಡಿದ ವಸಾಹತುಶಾಹಿ ಜಮೀನ್ದಾರಿ ವ್ಯವಸ್ಥೆ ರೂವಾರಿಗಳು ಮುಂದಿನ
ಳಿಯಾಗಿ ಬೆಳ್ಳಿಯನ್ನು ಕಾಫಿ ತೋಟಕ್ಕೆ ಕರೆದೊಯ್ಯುತ್ತಾರೆ. ತನ್ನ ತಂದೆಯ ಸಾಲವನ್ನು ತೀರಿಸಲು ಮೊದಲು
ೋದರರು ಕಾಫಿ ತೋಟಕ್ಕೆ ಹೋಗುವಾಗ ಬೆಳ್ಳಿಯ ಉಂಗುರವನ್ನು ಕೊಡುತ್ತಾ ಮಾನ ಹೋಗುವ
ಂಗದಲ್ಲಿ ಮಾರಿಯಾದರೂ ತಿನ್ನಿ" ಎಂದಿದ್ದ ಬೆಳ್ಳಿ ಮಿಂಗೇಲ ಮತ್ತು ಮನ್ವೇಲರ ಪಿತೂರಿಗೆ ಒಳಗಾಗಿ
ಂಗಿಕ ಶೋಷಣೆಗೆ ಬಲಿಯಾಗಿ ತನ್ನ ಮಾನವನ್ನೇ ಕಳೆದುಕೊಳ್ಳುವ ಸಂದರ್ಭ ಒದಗಿ ಬರುತ್ತದೆ.

ಇಷ್ಟೆಲ್ಲ ಶೋಷಣೆಗಳ ಮಧ್ಯೆ ಬದುಕುತ್ತಿರುವ ದಲಿತರು ಸ್ವಾಭಿಮಾನಿಗಳಾಗಿ ಬದುಕಬೇಕೆಂಬ ಆಸೆಗೆ
ವಸ್ಥೆ ತಣ್ಣೀರೆರಚಿ ತನಗೆ ಬೇಕಾದಂತೆ ಬಳಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತದೆ. ಚೋಮ ಗೇಣಿ ಪಡೆಯುವ
ಸೆಯನ್ನು ದನಿಯರ ಹತ್ತಿರ ಕೇಳಿ ನಿರಾಸನಾಗಿ ಮತ್ತು ಪಾದ್ರಿಯ ಹತ್ತಿರ ಹೋಗಿ ಅಲ್ಲಿಯೂ ನಿರಾಸನಾಗಿ
ಂದು ಚೋಮನು ಬೆಳ್ಳಿಯ ಹತ್ತಿರ ಹೇಳಿಕೊಂಡಾಗ "ಬೆಳ್ಳಿ ತಮ್ಮ ನೆಲೆಯನ್ನರಿತವಳು ಲೋಕವೆನ್ನುವ ಹಾಗೆ"
ನಾಯಿ ಬಿಳಿದಾಗಲಾರದೆಂದು ಬಲ್ಲವಳು ಆದುದರಿಂದ "ಅಪ್ಪಾ ನಾವು ನಮ್ಮ ಯೋಗ್ಯತೆಗೂ ಮೀರಿ ಆಸೆ
ಾಡಿದರೆ ನಡೆದೀತೆ ಬೇಸಾಯ ಮಾಡಬೇಕಾದರೆ ಬ್ರಾಹ್ಮಣರಾಗಿಯೋ, ಬಂಟರಾಗಿಯೋ, ಗೌಡರಾಗಿಯೋ
ುಟ್ಟ ಬೇಡವೇ? ಹಾಳಾದ ಹೊಲೆಯರಾಗಿ ಹುಟ್ಟಿ ಬೇಸಾಯ ಮಾಡಬೇಕು ಅಂದರೆ ಆಗುತ್ತದೆಯೋ ?
ೂರಿನ ಕಟ್ಟಳೆಯಿಲ್ಲವೆ ಎನ್ನುವಲ್ಲಿ ಬದಲಾಗದ ಜಾತಿವ್ಯವಸ್ಥೆಯಲ್ಲಿ ಒಬ್ಬ ಕೆಳವರ್ಗದ ವ್ಯಕ್ತಿ ಭೂಮಿಯ
ಡೆತನವನ್ನು ಪಡೆಯವುದನ್ನು ತಡೆಯುವಲ್ಲಿ ಹೂಡುವ ತಂತ್ರಗಳನ್ನು ಬೆಳ್ಳಿಯ ಮೂಲಕ ಹೇಳಿಸಿ ವ್ಯವಸ್ಥೆ
ಂದಿಗೂ ಬದಲಾಗುವುದಿಲ್ಲ. ಈ ವ್ಯವಸ್ಥೆಯಲ್ಲಿ ಆಯಾ ಜಾತಿಯ ಸ್ಥಾನಗಳನ್ನು ಹಾಗೆಯೆ ಕಾಪಾಡುವಂತಹ
ಮೂಲಕ ಕೆಳಜಾತಿಗಳು ಮೇಲೇರಲು ಯಾವುದೇ ಅವಕಾಶ ನೀಡದಂತ ಜಾತಿ ವ್ಯವಸ್ಥೆಯ ಜಮೀನ್ದಾರಿ
ವಸ್ಥೆಯ ಕುತಂತ್ರದ ಚಿತ್ರಣವನ್ನು ಲೇಖಕರು ಇಲ್ಲಿ ನೀಡಿದ್ದಾರೆ.

ಹಿಂದೂ ಸಮಾಜ ಚೋಮನ ಮಾನವ ಸಹಜ ಅಭಿಪ್ಸೆಯೊಂದನ್ನು ಈಡೇರಿಸುವಷ್ಟು ಬದಲಾಗಿಲ್ಲ. ತಿಭಟನೆಯ ಮೂಲಕ ತನ್ನ ಆಸೆಯನ್ನು ಪೂರೈಸಿಕೊಳ್ಳುವಷ್ಟು ರಾಜಕೀಯ ಸಾಮರ್ಥ್ಯವನ್ನು ಚೋಮನವರ್ಗ ಡೆದುಕೊಂಡಿಲ್ಲ. ಹಿಂದೂ ಸಂಸ್ಕೃತಿಯ ಚೌಕಟ್ಟಿನಲ್ಲಿಯೇ ದಲಿತರ ಸಮಸ್ಯೆಗಳು ಬಗೆಹರಿಯುವಷ್ಟು ಮಾಜ ಬೆಳೆದಿಲ್ಲ. ಚೋಮನ ಸಮಸ್ಯೆ ಅವನ ವರ್ಗದ ಸಮಸ್ಯೆಯೂ ಹೌದು. ವರ್ಣದ ಸಮಸ್ಯೆಯೂ ಹೌದು ಚೋಮನ ಸಮಸ್ಯೆಯ ಮೂಲ ಅವನು ಅನುಭವಿಸುವ ವರ್ಗ, ವರ್ಣಗಳ ಅಸಮಾನತೆಯ ರ್ಭದಲ್ಲಿಯೇ ಇದೆ.

ಇದರಿಂದ ಅವನಿಗೆ ಮುಕ್ತಿ ಇಲ್ಲ ಎಲ್ಲಿಯವರೆಗೆ ಹಿಂದೂ ಸಂಸ್ಕೃತಿ ನಿಶ್ಚಲವಾಗಿಯೇ ಇರುತ್ತದೆಯೋ, ಲ್ಲಿಯವರೆಗೆ ಯಥಾಸ್ಥಿತಿ ಮುಂದುವರಿಯಬೇಕು. ಇದು ಶತಮಾನಗಳ ವಾಸ್ತವ ಆದರೆ ಚೋಮನ ುಡಿಯ ಕಾಲ ದೇಶಗಳ ಸಂದರ್ಭದಲ್ಲಿ ಭಾರತೀಯ ಸಮಾಜ ಒಂದು ಹೊಸ ಮೌಲ್ಯ ವ್ಯವಸ್ಥೆಯ ಪ್ರವೇಶವನ್ನು ಎದುರುಗೊಂಡಿದೆ ವಸಹತುಶಾಹಿಯ ಮಿಶನರಿ ಸಂಸ್ಕೃತಿಯೊಂದಿಗೆ ಇಡೀ ಭಾರತವನ್ನು ಅದಾಗಲೇ ಪ್ರವೇಶಿಸಿದೆ. ಈ ಮಿಶನರಿಗಳು ಮತಾಂತರ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ಮುಖ್ಯವಾಗಿ ದಲಿತರು ಕ್ರೈಸ್ತಧರ್ಮಕ್ಕೆ ಸೇರಲಾರಂಭಿಸಿದ್ದಾರೆ. ಈ ಮತಾಂತರದ ಮುಖ್ಯ ಪ್ರೇರಣೆಯೆಂದರೆ ಮಿಶನರಿಗಳು ೀಡುವ ಆರ್ಥಿಕ ಪ್ರಲೋಭನೆ ಕ್ರೈಸ್ತ ಮತಕ್ಕೆ ಮತಾಂತರಗೊಂಡ ಅಸ್ಪೃಶ್ಯರಿಗೆ ಮಿಶನರಿಗಳು ಉಳಲು ಭೂಮಿಯನ್ನು ಕೊಡುತ್ತಿದ್ದಾರೆ. ಹಿಂದೂ ಸಂಸ್ಕೃತಿಯ ಚೌಕಟ್ಟಿನಲ್ಲಿ ಸ್ವಂತ ಭೂಮಿಯ ಆಸೆಯನ್ನು ತೋರದೆ ಜೀವಿಸಬೇಕಾಗಿದ್ದ ಅಸ್ಪೃಶ್ಯರಿಗೆ ಇಲ್ಲಿ ಬಿಡುಗಡೆಯ ಒಂದು ಮಾರ್ಗ ಗೋಚರಿಸುತ್ತದೆ.

ವಸಾಹತು ವ್ಯವಸ್ಥೆ ಸೂಜಿಗಲ್ಲಿನಂತೆ ತನ್ನತ್ತ ಸೆಳೆದುಕೊಳ್ಳುವಿಕೆಯಲ್ಲಿ ಕೆಲವು ಆಸೆ ಅಮಿಶಗಳ ತಂತ್ರಗಳನ್ನು ಹೂಡುವುದು ಮತಾಂತರ ಹೊಂದಲಿರುವ ದಲಿತರಿಗೆ ಭಾರತೀಯ ವ್ಯವಸ್ಥೆಯಲ್ಲಿ ಸಿಗದಿರುವ ಆರ್ಥಿಕ ಸ್ವಾತಂತ್ರ್ಯ, ಸಾಮಾಜಿಕ ಸ್ವಾತಂತ್ರ್ಯ, ಭೂ ಒಡೆತನದ ಆಸೆಗಳನ್ನು ತೋರಿಸಿ ಮತಾಂತರಗೊಳ್ಳುವಂತೆ ಮಾಡುವ ವ್ಯವಸ್ಥಿತವಾದ ಮೋಸಗಳು ಹಿಂದಿನ ವ್ಯವಸ್ಥೆಯಲ್ಲಿ ಶೋಷಣೆಗೊಳಗಾದವರಲ್ಲಿ ಅರಿವಿಗೆ ಬರುವುದಿಲ್ಲ. ಈ ಆಸೆ ಅಮಿಶಗಳಿಗೆ ಬಲಿಯಾಗಿ ಹಿಂದಿನ ವ್ಯವಸ್ಥೆಯ ಶೋಷಣೆಯಿಂದ ಮುಕ್ತರಾಗಲು ಮತಾಂತರ ಹೊಂದುವುದನ್ನು ಗಮನಿಸಬಹುದು.

ಆದರೆ ಚೋಮನ ತಲೆ ಮಾರಿಗೆ ಮತಾಂತರದ ವಿಷಯ ಸ್ವಲ್ಪ ತೊಡಕಿನದ್ದು. ವಸಾಹತುವ್ಯವಸ್ಥೆಯ ಹಿಂದಿನ ದುರುದ್ದೇಶಗಳ ಅರಿವು  ಅವರಿಗೆ ಇಲ್ಲದಿರಬಹುದು ಅವರಿಗಿರುವ ಸಮಸ್ಯೆಯೆಂದರೆ ಅವರು ಹಿಂದೂ ಸಂಸ್ಕೃತಿಯ ದೇವರು ದಿಂಡಿರು , ಹಬ್ಬ – ಆಚರಣೆ ಭಾವನಾತ್ಮಕ ಮತ್ತು ಒಂದು ಮಟ್ಟದಲ್ಲಿ ವ್ಯವಹಾರಿಕಸಂಬಂಧಗಳನ್ನು ಪಡೆದುಕೊಳ್ಳಬೇಕಾಗುತ್ತದೆ.

"ಚೋಮ ಮೀಸೆ ಹಣ್ಣಾಗುವ ತನಕ ನನ್ನನ್ನು ನಂಬಿ ಈಗ ಸಾಯುವ ಮೂರು ದಿನಕ್ಕೆ ಮುಂಚೆ ನನ್ನನ್ನು ಪಾದ್ರಿಯ ಹಿಂದೆ ಓಡುತ್ತಿಯೋ" ಎಂದು ಪಂಜುರ್ಲಿ ಭೂತ ಕೇಳಿದಂತೆ ಚೋಮನಿಗೆ ಅನಿಸುವುದು ಇದೇ ಕ್ಕಿರಬಹುದು ಹಾಗೂ ಲೇಖಕರ ಮನದ ಆಸೆಯೂ ಚೋಮನ ಮೂಲಕ ಹೊರಹೊಮ್ಮಿರಬಹುದು.

ಭಾರತೀಯ ಜಮೀನ್ದಾರಿ ವ್ಯವಸ್ಥೆ ಮತ್ತು ಜಾತಿ ಪದ್ಧತಿಯಿಂದ ಬೇಸತ್ತ ಗುರುವನಂತಹ ಯುವ ಮನಸ್ಸುಗಳಿಗೆ ್ಯವಸ್ಥೆಯಿಂದ ಆಚೆಗೆ ಬದುಕು ಕಟ್ಟಿಕೊಳ್ಳುವ ಒಂದು ಅವಕಾಶ ದೊರೆಯುತ್ತದೆ ಎಂದರೆ ಮತಾಂತರ ಒಂದು ಸ್ಯೆ ಎನಿಸುವುದಿಲ್ಲ. ಬದಲಾಗಿ ಅದೊಂದು ವರದಂತೆ ಕಾಣುತ್ತದೆ. ವಸಾಹತು ವ್ಯವಸ್ಥೆಯ ಹಿಂದಿನ ಕಾಣದ ು ಮಾಡುವ ಕೆಲಸಗಳು ಗುರುವನಂತವರಿಗೆ ಅರ್ಥವೇ ಆಗುವುದಿಲ್ಲ ಅಲ್ಲಿಯೂ ಸಹ ಮೂಲ ಕ್ರಿಶ್ಚಿಯನ್ನರು ಂತರ ಹೊಂದಿದ ಕ್ರಿಶ್ಚಿಯನ್ನರನ್ನು ನೋಡವು ರೀತಿಯೇ ಬೇರೆ ರೀತಿಯಾದದ್ದು ಅಲ್ಲಿಯೂ ಇವರು ಒಂದು ಯ ದಲಿತತ್ವವನ್ನು ಅನುಭಿವಿಸಬೇಕು. ಆದರೆ ಅದು ಹಿಂದೂ ಧರ್ಮಕ್ಕಿಂತ ಸ್ವಲ್ಪ ಭಿನ್ನವಾಗಿರಬಹುದು . ಈ ಸ್ಥಿತಿಯನ್ನು ಅನುಭವಿಸಿದ ಮತ್ತು ಅನುಭವಿಸುತ್ತಿರುವ ಮತಾಂತರ ಹೊಂದಿದ ದಲಿತರ ಪರಿಸ್ಥಿತಿ ಯಿಂದ ಬಾಣಲೆಗೆ ಎನ್ನುವಂತೆ ಬಾಸವಾಗುತ್ತದೆ.

ಬೆಳ್ಳಿ ತನ್ನ ತಂದೆಯ ಸಾಲವನ್ನು ತೀರಿಸಲು ಕಾಫಿ ತೋಟಕ್ಕೆ ದುಡಿಯಲು ಹೋಗುತ್ತಾಳೆ ಮನ್ವೇಲ ಮತ್ತು ರೆಯ ಲೈಂಗಿಕ ಆಸೆಗಳಿಗೆ ಬಲಿಯಾಗುತ್ತಾಳೆ. ಬೆಳ್ಳಿಯಂತಹ ಎಷ್ಟೋ ಮುಗ್ಧ ಮನಸ್ಸಿನ ಹೆಣ್ಣುಮಕ್ಕಳು ದಿಗೂ ಸಹ ಈ ವಸಾಹತು ವ್ಯವಸ್ಥೆ ರೂಪಿಸಿರುವ ತಂತ್ರಗಳಿಗೆ ಬಲಿಯಾಗುತ್ತಿದ್ದಾರೆ. ಕಾರ್ಖಾನೆಗಳಲ್ಲಿ ಹಲವು ನಿಗಳಲ್ಲಿ ದುಡಿಯುತ್ತಿರುವ ಎಷ್ಟೋ ಹೆಣ್ಣು ಮಕ್ಕಳಿಗೆ ಅವರ ದುಡಿಮೆಗೆ ತಕ್ಕ ಪ್ರತಿಫಲ ಅಥವಾ ಸಂಬಳ ರೆಯುತ್ತಿಲ್ಲ. ಅವರ ಮನೆಯ ಆರ್ಥಿಕ ಪರಿಸ್ಥಿತಿಗಳನ್ನು ಅರಿತ ಎಷ್ಟೋ ಜನ ಮಾಲೀಕರು ಅಧಿಕಾರಿಗಳು ಆ ್ಣ ಮಕ್ಕಳನ್ನು ಲೈಂಗಿಕವಾಗಿ ಬಳಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತಿದ್ದಾರೆ. ಅದನ್ನು ಮೂಕ ವೇದನೆಯಾಗಿ ಭವಿಸುತ್ತಿರುವ ಹೆಣ್ಣು ಮಕ್ಕಳಿಗೆ ಲೆಕ್ಕವಿಲ್ಲ.

ಚೋಮನದುಡಿ ಕಾದಂಬರಿಯಲ್ಲಿ ಆಧುನಿಕತೆಯ ಪ್ರವೇಶದಿಂದಾಗಿ ಜಡಗೊಂಡ ಸಮಾಜವೊಂದು ಸಲು ಪ್ರಾರಂಭಿಸುವ ಮಹಾ ದರ್ಶನ ಇದೆ. ಚೋನ ಸಮಸ್ಯೆ ಬಗೆಹರಿಯಲೇ ಬೇಕಾದ ಒತ್ತಾಯ ಇದೆ. ದೂ ಸಂಸ್ಕೃತಿ ಬದಲಾಗಬೇಕು ಎಲ್ಲ ವರ್ಗದ ಜನರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಉದಾರವಾಗಬೇಕು ದೂ ಸಮಾಜ ಎಚ್ಚರಗೊಳ್ಳದಿದ್ದರೆ ಅದರ ವಿನಾಶ ಸಂಭವಿಸುವ ಆತಂಕ ಇದೆ.

ಈ ಕಾದಂಬರಿ ಇಂಡಿಯಾದ ಭೂತ ವರ್ತಮಾನಗಳನ್ನು ಮಾತ್ರ ಹೇಳುತ್ತಿಲ್ಲ ಅದರ ಭವಿಷ್ಯವನ್ನೂ ಕಾಣಿಸುತ್ತದೆ. ವಸಾಹತುಶಾಹಿ ಮೂಲಕ ಪ್ರವೇಶಗೊಂಡ ಆಧುನಿಕತೆ ಹುಟ್ಟುಹಾಕಿರುವ ಹೊಸ ಸಂಘರ್ಷದಲ್ಲಿ ಹುಟ್ಟಲಿರುವ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಚಳುವಳಿಗಳ ಒಂದು ಮುನ್ನೋಟವನ್ನು ಕಾದಂಬರಿ ಕೊಡುತ್ತದೆ. ನಮ್ಮ ಸಂಸ್ಕೃತಿಯನ್ನು ಉಗ್ರವಾಗಿ ಖಂಡಿಸುತ್ತಲೇ ವಸಾಹತುಶಾಹಿ ವಿರೋಧಿ ಧ್ವನಿಯನ್ನು ಹೊರಡಿಸುತ್ತ ಇಂಡಿಯಾ ಬದಲಾಗಬೇಕಾದ ಅಗತ್ಯವನ್ನು ಬದಲಾಗಲಿರುವ ಸೂಚನೆಯನ್ನು ನೀಡುತ್ತದೆ.

ಸ್ವಾತಂತ್ರ್ಯಪೂರ್ವದಲ್ಲಿ ಬಂದ ಚೋಮನದುಡಿ ಕಾದಂಬರಿಯಲ್ಲಿನ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯವನ್ನು ವಿರೋಧಿಸುವ ಅಂಶಗಳು ಕಡಿಮೆ. ಸ್ವಾತಂತ್ರ್ಯದ ನಂತರದಲ್ಲಿ ಬಂದ ಕುಸುಮಬಾಲೆ ಕಾದಂರಿಯಲ್ಲಿ ಜಮೀನ್ದಾರಿ ವ್ಯವಸ್ಥೆ ತನ್ನ ರೂಪವನ್ನು ಕೊಂಚಮಟ್ಟಿಗೆ ಬದಲಾಯಿಸಿಕೊಂಡು ನಯವಂಚಕತನದಿಂದ ತನ್ನ ಕೆಲಸವನ್ನು ಸಾಧಿಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತದೆ. ಸ್ವಾತಂತ್ರ್ಯ ನಂತರ ಡಾ. ಅಂಬೇಡ್ಕರ್‌ರರ ತತ್ವಗಳನ್ನು ಅಳವಡಿಸಿಕೊಂಡ ದಲಿತ ಜನಾಂಗ ಸಂವಿಧಾನದ ನೆರವಿನಿಂದಾಗಿ ತಮ್ಮ ಪರಿಸ್ಥಿತಿಗಳ ಬದಲಾವಣೆಗೆ ಪ್ರಯತ್ನ ಪಡುತ್ತಿರುವಂತೆ ಕಾಣುತ್ತದೆ.

ದಲಿತ ಸಂಘರ್ಷ ಸಮಿತಿಯಂತಹ ಸಂಘಟನೆಗಳು ಹುಟ್ಟಿಕೊಂಡು ದಲಿತರ ಪರಿಸ್ಥಿತಿಗಳನ್ನು ಸಾಮಾಜಿಕವಾಗಿ ಕೊಂಚ ಬದಲಾವಣೆಯತ್ತ ಕೊಂಡೋಯ್ದಂತೆ ಬಾಸವಾಗುತ್ತದೆ. ಇಂತಹ ಪ್ರಯತ್ನಗಳು ನಡೆಯದೇ ಹೋಗಿದ್ದಲ್ಲಿ ಇಂದಿಗೂ ಸಹ ಚೋಮನ ಪರಿಸ್ಥಿತಿಯಲ್ಲಿಯೇ ಎಲ್ಲ ದಲಿತರು ಇರಬೇಕಾದ ಪರಿಸ್ಥಿತಿ ಇರುತ್ತಿತ್ತೆನಿಸುತ್ತದೆ.

ಕುಸುಮ ಬಾಲೆಯ ಯಾಡ ತಾನು ಶ್ರೀಮಂತ ನಾಗಲು ಅನುಸರಿಸುವ ಮಾರ್ಗಗಳು ಅಕ್ರಮವಾಗಿ ರಾಸುಗಳನ್ನು ಮಾರುವುದು ಖೋಟಾನೋಟಿನ ವ್ಯವಹಾರ ಇವೆಲ್ಲ ನಡೆಸಿ ಯಾಡೇಗೌಡನಾಗುವ ಮೂಲಕ ಪ್ರತಿಷ್ಟಿತ ವ್ಯಕ್ತಿಯಾಗುತ್ತಾನೆ. ಶ್ರೀಮಂತನಾದಮೇಲೆ ತನ್ನ ಯಾವ ತಪ್ಪುಗಳನ್ನೂ ಅನುಸರಿಸಿದ ಅಪಮಾರ್ಗಗಳನ್ನು ಸಮಾಜ ವಿರೋಧಿಸುವುದೇ ಇಲ್ಲ. ಆತನಿಗೆ ಪ್ರತಿಷ್ಠಿತ ವರ್ಗಕ್ಕೆ ಸೇರಿದವನೆಂಬ ಮೇಲ್ವರ್ಗದ ರಕ್ಷಾ ಕವಚವಿದೆ. ಆತ ಶ್ರೀಮಂತನಾದ ಮೇಲೆ ಆತ ಜೀತಗಾರನಿಗೆ ಹುಟ್ಟಿದನೆಂಬ ಅಪಕೀರ್ತಿಯೂ ಗೌಣವಾಗಿದೆ. ಆದರೆ ದಲಿತನಾದ ಗಾರ್‌ಸಿದ್ದ್ಮಾವ ತನ್ನ ಹಸಿವನ್ನು ನೀಗಿಸಿಕೊಳ್ಳಲು ಎಳೆನೀರನ್ನು ಕಿತ್ತದ್ದು ವ್ಯವಸ್ಥೆಯ ಕಣ್ಣಿಗೆ ಮಹಾ ಅಪರಾಧವಾಗಿ ಕಂಡು ಗಾರ್‌ಸಿದ್ದ್ಮಾವನನ್ನು ಕಂಬಕ್ಕೆ ಕಟ್ಟಿ ಹೊಡೆಯುವಂತಹ ಕ್ರೌರ್ಯಕ್ಕೆ ಜಮೀನ್ದಾರಿ ವ್ಯವಸ್ಥೆ ಮುಂದಾಗುತ್ತದೆ.

ಗಾರಸಿದ್ಮಾವ ಎಳನೀರನ್ನು ಕುಡಿಯಲು ಕಿತ್ತನೆಂದು ಬೇಕಾದರೆ ಈಗ ಕುಡಿದು ತೋರಿಸುತ್ತೇನೆ ಂದಾಗ ತೋಟದವ "ಅಯ್ ನಂತೋಟ್ದ ಎಳ್ನೀರು ಯಾರ್ಗಯ್ಯ ಇರದು? ಇವ್ನಗ ಕುಡಿಯಾಕಕನ ನಾವು ೋಟ ಮಾಡಿರದು ಅದ್ಯಾಕ ಹೇಳು? ಇವರವ್ವಂಗ ಮಿಂಡ ನಾನು ಅದ್ಕ" ಎಂದು ಪ್ರತಿಷ್ಠೆ ಎಂಬಂತೆ ೇಳಿಕೊಳ್ಳುವಲ್ಲಿ ಶತಶತಮಾನಗಳಿಂದ ಮೇಲ್ವರ್ಗದವರು ದಲಿತ ಸಮುದಾಯದ ಹೆಣ್ಣು ಮಕ್ಕಳ ಮೇಲೆ ಡೆಸುತ್ತಿರುವ ಲೈಂಗಿಕ ದೌರ್ಜನ್ಯ ತಮ್ಮ ಹಕ್ಕು ಎಂಬಂತೆ ಪ್ರತಿನಿಧಿತವಾಗಿದೆ. ಯಾವ ತಪ್ಪನ್ನೂ ಮಾಡದ ರಸಿದ್ಮಾವನ ತಾಯಿಗೆ ನಾನು ಮಿಂಡ ಎಂದು ಹೇಳಿಕೊಳ್ಳುವ ಮೂಲಕ ಸಂತೋಷ ಪಡುವ ಈ ೀಲ್ವರ್ಗದ ಜನ ಚನ್ನನಂತಹ ಅಮಾಯಕರ ಪ್ರಾಣಗಳನ್ನು ಬಲಿ ತೆಗೆದುಕೊಳ್ಳುವ ಕ್ರೌರ್ಯವನ್ನು ್ರದರ್ಶಿಸುತ್ತಾರೆ.

ದಲಿತ ಸಂಘರ್ಷ ಸಮಿತಿಯ ನಾಗರಾಜು ಬಂದಾಗ ಮೊಕಂಡನು "ಬಯ್ಯ ಬಯ್ಯಾ ಮೇಸ್ತ್ರ ನಿಮ್ ಾತವರ್ಗ್ಗ ನೀ ವಿ ಓದ್ದವ ಬುದ್ದಗಿದ್ದಿ ಹೇಳುದ್ರ ಆಗ್ಲಾರು ಕೇಳಿವ್ಯನ" ಎನ್ನುವಲ್ಲಿ ಜಮೀನ್ದಾರಿ ವ್ಯವಸ್ಥೆಯ ಯವಂಚಕತನ ಎದ್ದು ಕಾಣುತ್ತದೆ. "ಏನ್ರೀ ಸ್ವಾಮಿ, ಇಷ್ಟಕ್ಕೂ ಕಂಬಕ್ಕಟ್ಟಿ ಹೊಡ್ಡಿದ್ದೀರಲ್ಲಾ ನಿಮ್ದಾ ತಪ್ಪಲ್ವ? ಂದು ಕೇಳುವ ನಾಗರಾಜುವಿನಲ್ಲಿ ಚೋಮನ ನಂತರದ ತಲೆಮಾರು ಸುಧಾರಣೆಗೊಳಗಾಗಿ ತಮ್ಮ ಮೇಲಿನ ೌರ್ಜನ್ಯಗಳನ್ನು ವಿರೋಧಿಸಿ ಕೇಳುವಷ್ಟು ಮಟ್ಟಿಗೆ ಬದಲಾಗಿರುವುದನ್ನು ನೋಡಬಹುದು. ಮಠಕ್ಕೆ ತಪ್ಪುಕಾಣ್ಕಿ ಟ್ಟುವ ವಿಷಯದಲ್ಲಿ ಗಾರಸಿದ್ಮಾವ ತನ್ನ ಚಾಕಚಾಕ್ಯತೆಯಿಂದ ಒಂದು ರೂಪಾಯಿ ತಾನೇ ಪಡೆದುಕೊಳ್ಳುವುದು ದಲಾಗುತ್ತಿರುವ ದಲಿತರ ಮನಸ್ಥಿತಿಗಳನ್ನು ತೋರುತ್ತದೆ.

ಕೆಳಜಾತಿಯವನಾದ ಚನ್ನ ಮೇಲ್ವರ್ಗಕ್ಕೆ ಸೇರಿದ ಕುಸುಮ ಇಬ್ಬರೂ ಇಷ್ಟಪಟ್ಟು ಪ್ರೀತಿ ಮಾಡುತ್ತಾರೆ. ಈ ಇಬ್ಬರಲ್ಲಿ ಅಂತಸ್ತಿನ, ಜಾತಿಯ ಪರಿವೆಯೂ ಇರುವುದಿಲ್ಲ. ಆದರೆ ಸೋಮಪ್ಪನಂತಹ ಮೇಲ್ವರ್ಗ ಜಮೀನ್ದಾರರಿಗೆ ಇದು ಅಪಮಾನದ ತನ್ನ ಪ್ರತಿಷ್ಠೆಗೆ ದಕ್ಕೆ ಬರುವಂತಹ ವಿಷಯ ಹಾಗಾಗಿ ಏನೂ ಅರಿಯದ ಮುಗ್ದನಾದ ಚನ್ನ ಪ್ರೀತಿಸಿದ ಒಂದೇ ತಪ್ಪಿಗಾಗಿ ಜಮೀನ್ದಾರಿ ವರ್ಗದ ಕುತಂತ್ರಕ್ಕೆ ಬಲಿಯಾಗಿ ಕೊಲೆಯಾಗುತ್ತಾನೆ. ಸಮಾಜಕ್ಕೆ ತಿಳಿಯದ ರೀತಿಯಲ್ಲಿ ಚನ್ನ ಕೊಲ್ಲಲ್ಪಡುತ್ತಾನೆ. ಇಂದಿಗೂ ಸಹ ಮರ್ಯಾದೆ ಹತ್ಯೆಗಳು ನಡೆಯುತ್ತಿರುವುದನ್ನು ಜಮೀನ್ದಾರಿ ವ್ಯವಸ್ಥೆಯ ಮುದುವರಿಕೆಯ ಭಾಗವಾಗಿ ನೋಡಬಹುದಾಗಿದೆ. ಶತಮಾನಗಳಿಂದಲೂ ಇಂಥಹ ವರ್ಣಸಂಕರದ ಸಂದರ್ಭಗಳಲ್ಲಿ ದಲಿತವರ್ಗ ಜಮೀನ್ದಾರಿ ವ್ಯವಸ್ಥೆಯ ಮೋಸಕ್ಕೆ ಕುತಂತ್ರಕ್ಕೆ ನಯವಂಚಕತನದ ಕೌರ್ಯಕ್ಕೆ ಮೂಕವಾಗಿ ಬಲಿಯಾಗುತ್ತಿದೆ. ಏನೇ ಕಾನೂನುಗಳು ಹಾಗೂ ಚಳುವಳಿಯ ಬಿಗಿ ಇದ್ದರೂ ಅವುಗಳಿಗೂ ದಕ್ಕದ ರೀತಿಯಲ್ಲಿ ಮೇಲ್ವರ್ಗದ ವ್ಯವಸ್ಥೆಯು ದಲಿತರನ್ನು ಬಲಿ ತೆಗೆದುಕೊಳ್ಳುತ್ತದೆ.

ಅಮಾಸ ಜಮೀನ್ದಾರಿ ವ್ಯವಸ್ಥೆಯಿಂದ ಬಿಡಿಸಿಕೊಂಡು ಸ್ವತಂತ್ರ್ಯ ಕಾಯಕದಲ್ಲಿ ತೊಡಗಿರುವುದು ೕಲ್ಜಾತಿಯವರಿಗೆ ಸಹಿಸದಾಗಿದೆ. ದಲಿತರು ಜೀತವನ್ನು ಬಿಟ್ಟು ಇಂತಹ ಸಣ್ಣಪುಟ್ಟ ಸ್ವಂತ ಉದ್ಯೋಗಗಳನ್ನು ಡುಕಿಕೊಂಡು ಸ್ವತಂತ್ರರಾಗಿ ನಾಳೆ ತಮ್ಮ ಆಸ್ತಿತ್ವಕ್ಕೆ ಕುಂದುಬರಬಹುದು ಎಂಬ ಭಯ ಅವರಲ್ಲಿ ಬಂದು ಂತಹ ಬೆಳೆವಣಿಗೆಗಳನ್ನು ಚಿಗುರುವಲ್ಲಿಯೇ ಚಿವುಟಿ ಹಾಕುವ ಪ್ರಯತ್ನಗಳು ನಡೆಯುತ್ತಲೇ ಇರುತ್ತವೆ. ೕಮನಿಗೆ ಭೂಮಿ ನೀಡಿದರೆ ಸ್ವತಂತ್ರ್ಯನಾಗಿ ಮುಂದೆ ನಮ್ಮ ಹಟ್ಟಿಯಲ್ಲಿ ಜೀತ ಮಾಡುವವರು ಯಾರು ಂಬ ಸಂಕಪ್ಪಯ್ಯ ಮತ್ತು ಅವನ ತಾಯಿಯ ಮನಸ್ಸಿನ ಭಾವನೆಗಳಲ್ಲಿಯೂ ಈ ಮನೋಭಾವವನ್ನು ಣಬಹುದು. ಇಲ್ಲಿ ಅಮಾಸ ತನ್ನ ಉದ್ಯೋಗದ ನಿಮಿತ್ತ ಬಾಡಿಗೆ ಸೈಕಲನ್ನು ತುಳಿಯುತ್ತಾ ಬರುವಾಗ ಠದ ಪಡಸಾಲೆಯಲ್ಲಿ ಇಸ್ಪೀಟನ್ನು ಆಡುವ ಗುಂಗಿನಲ್ಲಿದ್ದ ಮೇಲ್ಜಾತಿಯ ಜನ "ನೋಡ್ರುದ್ರಾ ನೋಡ್ರುದ್ರಾ ೂಟ್ಟಗ ಹಿಟ್ಟು ಇಲ್ದೆ ಇದ್ರೂ ಆ ಹೊಲಿನ್ ಕೊಬ್ಬ! ಹಾವ್ನಥರ್ವಾಗಿ ನಲೀತಾ ಬತ್ತಾ ಅವ್ನಲ್ಲಾ ಬಡ್ಡೇದ್ನಗ ಆ ್ಯಂಡಲ್ನೆ ಹಿಡ್ಕಳಕ ಆಗಬಾರ್ದು ಆಥರ್ವಾಗಿ ಅವನ್ನ ಆ ಏಡು ಮುಂಗೈನಿಕ ಕತ್ತರ್ಸಿ ಅತ್ತಾಗೊಂದು ಇತ್ತಾಗೊಂದು ಸ್ದ್ ಬುಟ್ರೀಗಪ್ಪಾ" ಎಂದು ಹೇಳುವಲ್ಲಿ ದಲಿತರನ್ನು ತಮ್ಮ ಹಂಗಿನಲ್ಲಿಯೇ ಇರಿಸಿಕೊಳ್ಳಬೇಕೆಂಬ ಅದಮ್ಯ ಯಕೆ ಯೋಗ್ಯರಾದರೂ ದಲಿತರು ಮೇಲ್ವರ್ಗದವರ ಮುಂದೆ ಕನಿಷ್ಟರಾಗಿಯೇ ಇರಬೇಕೆಂಬುದು ವ್ಯವಸ್ಥೆಯನ್ನು ಯಥಾಸ್ಥಿತಿಯಲ್ಲಿಯೇ ಉಳಿಸಿಕೊಳ್ಳುವ ಹುನ್ನಾರವಾಗಿದ್ದು ಅದನ್ನು ಮೀರಿ ನಡೆದವರು ಯಾವುದೇ ತಪ್ಪು ಮಾಡದಿದ್ದರೂ ಅವರನ್ನು ಶಿಕ್ಷೆಗೆ ಗುರಿ ಪಡಿಸಬೇಕು ಎಂಬ ಭಾವನೆ ಅವರಲ್ಲಿ ಬರುತ್ತದೆ.

ಆಧುನಿಕ ಸಂದರ್ಭದಲ್ಲಿ ದಲಿತರ ಸ್ಥಿತಿಗತಿಗಳು ಕೊಂಚ ಬದಲಾದಂತೆ ಕಂಡರೂ ವಿದ್ಯೆಯನ್ನು ಪಡೆದು ಸ್ಥಿತಿವಂತರಾದರೂ ಅಲ್ಲಿಯೂ ಸಹ ಮೇಲ್ವರ್ಗದ ಮೂಲಭೂತವಾದಿ ಮನಸ್ಸುಗಳು ಜಮೀನ್ದಾರಿ ವ್ಯವಸ್ಥೆಯ ಶೋಷಕ ವರ್ಗಗಳು ಇಲ್ಲಿಯೂ ಸಹ ತಮ್ಮ ದರ್ಪ ಮತ್ತು ಶೋಷಣೆಯನ್ನು ರೂಪಾಂತರಗೊಳಿಸಿ ನಡೆಸುತ್ತಿರುವುದು ಎಂದಿಗೂ ಈ ಸಮಾಜ ಬದಲಾಗದೇನೋ ಎನ್ನುವ ಅನುಮಾನಕ್ಕೆ ಎಡೆಮಾಡಿಕೊಡುತ್ತವೆ.

ಜೀತ ವಿಮೋಚನಾ ಚಳುವಳಿಯಲ್ಲಿ ನಡೆಯುವ ಸಂದರ್ಭದಲ್ಲಿ ಚನ್ನನ ಅಪ್ಪನನ್ನು ಶಿವಾಚಾರದವರು ಇದ್ದ್ಯಾನ ಬುದ್ಯೊ ಮಾಡೋದು ನಿಂ ಜಾತ್ಯವರೆಲ್ಲಾ ನಾಳರೆಂದ್ಲಿಯ ಜೀತ ಬುಟ್ ಬುಟ್ಟರಂತಲ್ಲಾ" ಅಂತ ಬ್ಬ ಅಂದು ನಿಲ್ಲುಸುದ್ರ ಇನ್ನೊಬ್ಬ "ಜೀತ ಬಿಟ್ಟಮೇಲೆ ಹೊಲಾರ್ನೆನ ಮಾತಾಡ್ಸಕ ಆದ್ದಯ್ಯ! ಯಾನಾರಾ ಕೊಡಕ್ಕ ಆದ್ದಯ್ಯ! ಆಗ ಹೊಲಾರ್ರು ಅನ್ನತುಪ್ಪನಿಯ ಕಯ್ಯೋ ಉಣ್ಣಾದು" ಎಂದು ಹೇಳುವಲ್ಲಿ ವ್ಯಂಗ್ಯವನ್ನ ಕಾಣಬಹುದು ಹಾಗೂ ಜಮೀನ್ದಾರಿ ವ್ಯವಸ್ಥೆಯಿಂದ ಹೊರಬಂದು ಸ್ವತಂತ್ರ್ಯರಾಗಿ ಜೀವನ ಸಾಗಿಸಲು ಸಾಧ್ಯವೇ ಇಲ್ಲ ಜೀತ ಮಾಡಿದರೆ ಮಾತ್ರ ದಲಿತರ ಬದುಕು ಸಾಗುವುದು. ಮೇಲ್ಜಾತಿಯವರ ಮನೆ ತೋಟಗಳ ಜೀತವಿಲ್ಲದೆ ದಲಿತರು ಬದುಕಲು ಸಾಧ್ಯವಿಲ್ಲ ಎಂಬ ಒಳಾರ್ಥವನ್ನು ಮತ್ತು ಜೀತ ಮುಂದುವರಿಸಬೇಕು, ಮುಂದುವರಿಯುತ್ತದೆ ಎಂಬ ಅಂಶವು ಶಿವಾಚಾರದವರ ಮಾತಿನಲ್ಲಿ ವ್ಯಕ್ತವಾಗಿವೆ.

ಇಲ್ಲಿಂದ ವೋಟು ತಕ್ಕೊಂಡು ಗೆದ್ಕಂಡು ಹೋಯ್ತರಲ್ಲಾ ಆ ನಿಮ್ ಜಾತದವರ ಆ ಇಂದ್ರಾಗಾಂಧಿ
ಬವ್ವೇ ಜೀತ್ಕ ಇರ್ಸಿಗಂಡಿದ್ದಾಳಂತೆ ! ಈ ಥರವಾಗಿ ಅವ್ವೆ ಇರಬೇಕಾದ ಇನ್ನು ನಿಂಮ್ಗಳ ಜೀತಬುಡ್ರೋ-
ದಾಳ ? ಇಲ್ಲಿ ನಾಕ್ಐಕ ಕೂಕ್ಕಂಡ್ರ ದಿಳ್ಳಿಗೆ ಕೇಳ್ಸ ಮಾತುಡ ಅದೂ ? ಎಂದು ಹೇಳುವಲ್ಲಿ ಪ್ರಜಾತಂತ್ರ
ವಸ್ಥೆಯಲ್ಲಿ ಪ್ರಜಾ ಪ್ರತಿನಿಧಿಗಳಾಗಿ ಆಯ್ಕೆಯಾಗಿ ಹೋಗುವ ದಲಿತ ಪ್ರತಿನಿಧಿಗಳು ಮೇಲ್ಜಾತಿ ವ್ಯವಸ್ಥೆಯ
ೊಂಬೆಗಳಾಗಿ ಹೈಟೆಕ್ ಗುಲಾಮಗಿರಿಯ ಗುಲಾಮರಾಗಿ ತಮ್ಮ ಸಮುದಾಯಗಳ ಕುರಿತಾಗಿ ಯೋಚಿಸದ
ವರ ಅಭಿವೃದ್ಧಿಗೆ ಗಮನ ಹರಿಸದ ದಲಿತ ನಾಯಕ ಉಡಾಫೆಯನ್ನು ಅಮಾಯಕತನವನ್ನೂ ಹೇಳುತ್ತದೆ.
ರೀತಿಯ ಗುಲಾಮಗಿರಿ ಇಂದಿಗೂ ರಾಜಕೀಯ ಕ್ಷೇತ್ರದಲ್ಲಿ ನಡೆಯುತ್ತಿರುವುದು ಗೋಚರಿಸುತ್ತದೆ.

ಚಳುವಳಿಗಳು ಹುಟ್ಟಿಕೊಂಡು ಮೊದಲಿನಲ್ಲಿ ನಾಯಕರೆಲ್ಲರೂ ಒಟ್ಟಾಗಿ ಕೂಡಿ ಚಳುವಳಿ ಮಾಡುತ್ತಿದ್ದುದು
ಶಸ್ಸಿಗೆ ಕಾರಣವಾದರೂ ನಂತರದ ದಿನಗಳಲ್ಲಿ ನಾಯಕರ ಭಿನ್ನಾಭಿಪ್ರಾಯಗಳಿಂದ ಚಳುವಳಿಗಳು ಒಡೆದು
ಹೀನವಾಗಿ ಕೆಲ ನಾಯಕರು ಸ್ವಂತ ಆಸೆ ಆಮೀಷಗಳನ್ನು ಈಡೇರಿಸಿಕೊಳ್ಳಲು ಚಳುವಳಿಯನ್ನು
ಳಸಿಕೊಂಡಿದ್ದು ಸೋಲಿಗೆ ಕಾರಣವೆನ್ನಬಹುದು. ಹೀಗೆ ಒಡೆದ ಚಳುವಳಿ ಬೇರೆ ಬೇರೆಯಾಗಿ ಹೋರಾಟ
ಾಡಿ ಸಾಧಿಸಲು ಸಾಧ್ಯವಿಲ್ಲ. ಎಲ್ಲಾ ಚಳುವಳಿಯ ತಂಡಗಳು ಒಂದಾದರೆ ಅದಕ್ಕೊಂದು ಶಕ್ತಿ ಇರುತ್ತದೆ
ಂಬ ಅರ್ಥವನ್ನು ಇದು ಹೇಳುವಂತಿದೆ. ದಲಿತ ಸಂಘರ್ಷ ಸಮಿತಿಯ ಸಂಸ್ಥಾಪಕರಾದ ಪ್ರೋ॥ ಬಿ
ಷ್ಣಪ್ಪನವರ ಕೊನೆಯ ದಿನಗಳಲ್ಲಿ ದಲಿತ ಸಂಘರ್ಷ ಸಮಿತಿಯಲ್ಲಿ ಆದ ಒಡಕುಗಳು ಅವರು ಸತ್ತ ನಂತರ
ಳುವಳಿ ಹಿಡಿದ ಹಾದಿಯನ್ನು ಅದರ ಪರಿಣಾಮವನ್ನು ಲೇಖಕರು ಇಲ್ಲಿ ವ್ಯಕ್ತಪಡಿಸಿದಂತಿದೆ.

## ಕೊನೆ ಟಿಪ್ಪಣಿ :

) ದಲಿತ ಅಧ್ಯಾಯನ, – ಸಂಪಾದಕರು ಡಾ॥ ಟಿ.ಆರ್. ಚಂದ್ರಶೇಖರ್,
– ಕನ್ನಡ ವಿ.ವಿ.ಹಂಪಿ – 2005 ಪುಟ – 51

) ಚೋಮನದುಡಿ – ಡಾ॥ ಕೆ. ಶಿವರಾಮಕಾರಂತ
– ಪ್ರಕಾಶಕರು ಎಸ್.ಬಿ.ಎಸ್. ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್,
ಬೆಂಗಳೂರು – 2010 ಮುನ್ನುಡಿಯಿಂದ

) ಅಂಬೇಡ್ಕರ್ / ಮನುವಾದ, – ಮಾ.ನಾ. ಜವರಯ್ಯ
– ಬಹುಜನ ಮಾದ್ಯಮ ಕೇಂದ್ರ – ಮೈಸೂರು–2007 ಪುಟ – 321

) ಚೋಮನದುಡಿ – ಡಾ॥ ಕೆ. ಶಿವರಾಮಕಾರಂತ
– ಪ್ರಕಾಶಕರು ಎಸ್.ಬಿ.ಎಸ್. ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, 2010 ಪುಟ – 20

) ವರ್ಣದಿಂದ ವರ್ಗದ ಕಡೆಗೆ – – ಆರ್.ವಿ. ಭಂಡಾರಿ
– ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು – 2003 ಪುಟ – 157

) ಶಿವರಾಮಕಾರಂತರ ಕಾದಂಬರಿಗಳಲ್ಲಿ ಮಾನವೀಕಣರದ ನೆಲೆಗಳು
–ಪಿ.ಹೆಚ್.ಡಿ. ಪ್ರಬಂಧ, ಡಾ. ರೇವಣ್ಣ ಒಡೆಯರ್
ಕನ್ನಡ ಸಾಹಿತ್ಯ ಪರಿಷತ್ ಪುಟ – 75

) ಚೋಮನದುಡಿ – ಶಿವರಾಮಕಾರಂತ
– ಪ್ರಕಾಶಕರು ಎಸ್.ಬಿ.ಎಸ್. ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, 2010 ಪುಟ – 11

) ಕಾರಂತರ ಚಿಂತನ – ಸಂಪಾದಕರು –ನಾಗ ಐತಾಳ
– ಹೆಗ್ಗೋಡು ಸಾಗರ –2000 ಪುಟ – 124

) ಡಾ. ಡೋಮಿನಿಕ್, ಕನ್ನಡ ಸಾಹಿತ್ಯ ಸಂಸ್ಕೃತಿ ಏಕರೂಪಿಕರಣದ
ಅಪಕಲ್ಪನೆಗಳು ಪುಟ – 50

) ಚೋಮನದುಡಿ – ಶಿವರಾಮಕಾರಂತ

– ಪ್ರಕಾಶಕರು ಎಸ್.ಬಿ.ಎಸ್. ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, 2010 ಪುಟ – 27

ಅದೇ ------------"---------- ಪುಟ –44

) ಅದೇ ------------"---------- ಪುಟ –101

) ಶಿವರಾಮ ಕಾರಂತರ ಎರಡು ಅಧ್ಯಯನಗಳು – ಟಿ.ಪಿ. ಅಶೋಕ,

– ಅಕ್ಷರ ಪ್ರಕಾಶನ – 1992 ಪುಟ – 97

) ಕುಸುಮ ಬಾಲೆ – ದೇವನೂರ ಮಹದೇವ

– ಅಭಿನವ ಪ್ರಕಾಶನ, ಬೆಂಗಳೂರು – 2002 ಪುಟ – 78

) ಅದೇ ------------"---------- ಪುಟ –79

) ಅದೇ ------------"---------- ಪುಟ –75

) ಅದೇ ------------"---------- ಪುಟ –129

# ಚೋಮನದುಡಿ ಮತ್ತು ಕುಸುಮಬಾಲೆ ಕಾದಂಬರಿಗಳಲ್ಲಿನ ಲಿಂಗ ಸಮಾನತೆ

ದಲಿತ ಸಂಸ್ಕೃತಿಯಲ್ಲಿ ಕಲೆಯು ಬಹುಮುಖ್ಯ ಸ್ಥಾನ ಪಡೆದಿದೆ. "ದಲಿತ ಸಂಸ್ಕೃತಿಯ ಜೀವಂತಿಕೆ ುವುದೇ ಸತ್ ಪರಂಪರೆಯ ಶಕ್ತಿಯಲ್ಲಿ ಕಲೆಯ ಬಗೆಗೆ ಮಾತನಾಡುವ ಸಂದರ್ಭದಲ್ಲಿ ನಮ್ಮ ಗ್ರಾಮೀಣ ೇಶದಲ್ಲಿ ಒಂದು ನಂಬಿಕೆ ಇದೆ. ಒಮ್ಮೆ ಎತ್ತಿನ ಗಾಡಿಯಲ್ಲಿ ಹಾಡು ಕುಣಿತಗಳನ್ನು ತುಂಬಿಕೊಂಡು ಎಲ್ಲ ರ್ಗದವರಿಗೂ ಹಂಚಬೇಕೆಂದು ದೇವರುಗಳು ಹೊರಡುತ್ತವೆ. ಎತ್ತಿನ ಗಾಡಿ ಹೊಲೆಮಾದಿಗರ ಕೇರಿಗೆ ಂದ ತಕ್ಷಣ ಅಚ್ಚು ಮುರಿದು ನೆಲಕ್ಕುರುಳುತ್ತದೆ. ಆಗ ಹೊಲೆಮಾದಿಗರು ಹಾಡು ಕುಣಿತಗಳನ್ನು ತಮಗೆ ೇಕಾದಷ್ಟು ಬಾಚಿಕೊಂಡರು. ಅದಕ್ಕಾಗಿಯೆ ಹೊಲೆ ಮಾದಿಗರಲ್ಲಿ ಕಲಾ ಶ್ರೀಮಂತಿಕೆ ಹೆಚ್ಚು ಎಂಬುದು ಳ್ಳಿಯ ದಲಿತರ ನಂಬಿಕೆಯಾಗಿದೆ. ಈ ರೀತಿಯಾಗಿ ತಮ್ಮ ಘನತೆಯನ್ನು ಅಸ್ಪೃಶ್ಯತೆಯ ಅವಮಾನದೊಳಗೂ ್ಥಪಿಸುವಂಥ ಕ್ರಿಯಾಶೀಲತೆ ದಲಿತ ಸಂಸ್ಕೃತಿಯದಾಗಿದೆ.

ಚೋಮನದುಡಿ ಕುಸುಮ ಬಾಲೆಯಲ್ಲಿಯೂ ಇಂಥಹ ಸಂದರ್ಭಗಳನ್ನು ಕಾಣಬಹುದು. ಚೋಮ ನ್ನ ಇಡೀ ಬದುಕಿನ ಉದ್ದಕ್ಕೂ ಸಂತೋಷ ದುಃಖದ ಎರಡೂ ಸಂದರ್ಭಗಳ್ಲಲೂ ದುಡಿಯ ನಂಟು ವನಿಗಿದ್ದದ್ದೇ. ದುಡಿ ಅವನ ಬದುಕಿನ ಅವಿಭಾಜ್ಯ ಅಂಗ. ದುಡಿಯೊಟ್ಟಿಗಿನ ಅವನ ಬಾಂಧವ್ಯ ಪೂರ್ವವಾದದ್ದು. ದುಡಿಯ ಬಡಿತ "ಢಮಢಮ ಢಕಡಕ್ಕ" ಎನ್ನುವ ತಾಳಕ್ಕೆ ತಕ್ಕಂತೆ ಬೆಳ್ಳಿ "ಲೇ ಲೇಲೆ" ಂದು ಹಾಡುವುದು ಅದನ್ನು ಅನುಸರಿಸಿ ನೀಲ ಕಾಳರು ಹೆಜ್ಜೆ ಹಾಕುತ್ತಾ ಕುಣಿಯುವುದು. ಒಡಲಾಳದ ರುಸಿದ್ದೂ ಸಹ ಕಲೆಯನ್ನು ತನ್ನ ಜೀವನದ ಅವಿಭಾಜ್ಯ ಅಂಗವಾಗಿಸಿಕೊಂಡು "ನಾಟಕದಲ್ಲಿ ಕರ್ಣನ ಾತ್ರ" ಮಾಡುವುದು ಅಮಾಸ ಕಥೆಯ ಅಮಾಸ "ಹುಲಿವೇಶ ತೊಟ್ಟು ತಮಟೆಯ ಏಟಿಗೆ ಹೆಜ್ಜೆ ಾಕುವುದು ಕುಸುಮ ಬಾಲೆಯಲ್ಲಿ ಗಾರ್‌ಸಿದ್ಮಾವ ಸೇರಿದಂತೆ ಹಲವು ದಲಿತರು ತಮಟೆಯನ್ನು ಹೊಡೆಯುತ್ತ, ುಣಿಯುತ್ತಾ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾರೆ. ಚೋಮ ತನ್ನ ಆಸೆಗಳನ್ನು ಈಡೇರಿಸದ ದನಿಗಳ ಿರುದ್ಧ ನೇರವಾಗಿ ಪ್ರಭಟನೆ ಮಾಡದಿದ್ದರೂ ದುಡಿಯನ್ನು ಹೊಡೆಯುವ ಮೂಲಕ ಪರೋಕ್ಷವಾಗಿ ್ರತಿಭಟಿಸುತ್ತಾನೆ. ದಲಿತರು ಇಂದಿಗೂ ತಮ್ಮ ಪ್ರತಿಭಟನೆಯ ಅಸ್ತ್ರವಾಗಿ ಕಲೆಯನ್ನೆ ಉಪಯೋಗಿಸಿಕೊಳ್ಳುತ್ತಿದ್ದಾರೆ. ಮಟೆ ಚಳುವಳಿಗಳ ಮೂಲಕ, ಕ್ರಾಂತಿಗೀತೆಗಳ ಮೂಲಕ, ಸಾಹಿತ್ಯದ ಮೂಲಕ ವ್ಯವಸ್ಥೆ ನಡೆಸುವ ನ್ಯಾಯದ ವಿರುದ್ಧ ಹೋರಾಡಲು ದಲಿತರಿಗೆ ಕಲೆ ನೆರವಾಗುತ್ತದೆ.

ಎಲ್ಲ ಕುಲ ಜಾತಿಗಳನ್ನು ಪ್ರತಿನಿಧಿಸುವ ಜ್ಯೋತಮ್ಮದೀರು ಸರ್ವಜಾತಿ ವರ್ಗಗಳ ಸಮೂಹ ಪ್ರಜ್ಞೆಯ
ೀಕವಾಗಿದ್ದು ಇದು ಸಮೂಹದ ಸಾಂಸ್ಕೃತಿಕ ಬದುಕನ್ನು ಅನಾವರಣಗೊಳಿಸುವ ಸಮೂಹ ಕೇಂದ್ರಿತ
ಎಂಬ ಸೂಚನೆ ಈ ಜ್ಯೋತಮ್ಮದೀರ ಪ್ರಸಂಗದಿಂದ ತಿಳಿಯುತ್ತದೆ.

"ಕಲ್ಲೂ ನೀರು ಕರಗುತ್ತಿತ್ತೂ, ಆಗ ಕ್ರಿಯಾ ಮುಗಿಸಿದ ಜ್ಯೋತಮ್ಮದೀರು ಕಷ್ಟ ಸುಃಖ ಮಾತಾಡಿಕೊಳ್ಳಲು
ವಸ್ತಲ ಊರಮುಂದಲು ರೂಡಿಗತದಂತೆ ಕೂಡಿದರು" ಎಂಬ ಮಾತಿನಲ್ಲೇ ಇವರು ರೂಪಮಾತ್ರದವರಾಗಿರದೆ
ವಜ್ಯೋತಿಯ ಸತ್ಯ ಸಂಕತನದ ಪ್ರತಿಮಾರೂಪಗಳೆಂಬ ಅರಿವು ಮೂಡುತ್ತದೆ. ಇಡೀ ಊರಿನ ಸುಃಖ
ಃಖ, ನೋವು-ನಲಿವು, ಸರಿ-ತಪ್ಪಿನ ಬದುಕಿನ ಆಗು ಹೋಗುಗಳನ್ನು ಜಿಜ್ಞಾಸೆಗೆ ಒಳಪಡಿಸುವ
ಯದೇವತೆಗಳಂತೆ ಕಂಡುಬರುತ್ತಾರೆ. ಇವರಲ್ಲಿ ದೊಡ್ಡೋರ ಹಟ್ಟಿ ಜ್ಯೋತಮ್ಮ, ಹಾರೂರಹಟ್ಟಿ ಜ್ಯೋತಮ್ಮ
ಪ್ಪು ಸೊದೆ ವ್ಯಾಪಾರಸ್ಥೆ ತೂರರ ಹಟ್ಟಿ ಜ್ಯೋತಮ್ಮ ಹೊಲೆಯರ ಮಾರಿಗುಡಿ ಜ್ಯೂತಮ್ಮ ಅಲೆದಾಟದ
ಂಬ್ರ ಜ್ಯೋತಮ್ಮ ಇವರೆಲ್ಲರೂ ಕೂಡಿರುತ್ತಾರೆ.

ಕುಸುಮಳ ಬಗ್ಗೆ ಜ್ಯೋತಮ್ಮದೀರು ಮಾತಾಡುವಾಗ ಜೀವಪರವಾದ ಪ್ರೀತಿ ಕಾಣುತ್ತದೆ. ಸೊಪ್ಪು
ರೆ ವ್ಯಾಪಾರಕ್ಕೆ ತೂರಾರ ಹಟ್ಟಿ ಜ್ಯೋತಮ್ಮ ಅಕ್ಕೈನಾ ಹೇಳ್ತೀನಿ ತಾಳಿ ಅದ ಎಂದಾಗ ಎಲ್ಲಾಕು ಬಾಯಕಂದು
ವ್ವ ಆ ಹಟ್ಟಿ ತಳಪಾಯದ ದಿನವೇ ಹುಟ್ಟಿರೋ ನಂಗಿಯ ಗೊತ್ತಿಲ್ವಂತ ಇನ್ನು ನೀಯಾನ್ನ ಹೇಳದು
ದು ದೊಡ್ಡೋರ ಹಟ್ಟಿ ಜ್ಯೋತಮ್ಮ ಸಿಡುಕಿನಿಂದ ತಡೆಯುವಲ್ಲಿ ಅವಳ ವರ್ಗ ಹಿತಾಸಕ್ತಿ ಅಡಗಿರುವಂತೆ
ೀರುತ್ತದೆ.

ಹಾರೂರ ಹಟ್ಟಿ ಜ್ಯೋತಮ್ಮನ ಮಾತು ವರ್ಣಸಂಕರ ಸಹಜ ಎಂಬ ಸತ್ಯವನ್ನು ತಿಳಿಸುವಂತಿದೆ.
ಲ್ಲದೆ ಕುಸುಮಗಳ ಚೆನ್ನನ ನಡುವಿನ ಸಂಬಂಧದದ ಬಗ್ಗೆ ತಲೆಕೆಡಿಸಿಕೊಳ್ಳದ ಜ್ಯೋತಮ್ಮದೀರು ಕುಸುಮಳ
ರೋಗ್ಯದ ಬಗ್ಗೆ ಚಿಂತಿತರಾಗುವುದು ಅವರ ಜೀವಪರ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. ಬದುಕನ್ನು
ಟ್ಟಿಕೊಳ್ಳುವಲ್ಲಿ ದಲಿತರಿಗಾದಷ್ಟು ಕಷ್ಟ ನಷ್ಟಗಳು ಮೇಲ್ಜಾತಿಯವರಿಗೆ ಆಗಲಾರವು ಅವರಿಗೆ ಮೇಲ್ಜಾತಿ
ಂಬುದೇ ಸಮಾಜದಲ್ಲಿ ಶ್ರೀರಕ್ಷೆಯಾಗುತ್ತದೆ. ಜೊತೆಗೆ ಅವಕಾಶಗಳೂ ಹೆಚ್ಚಾಗುತ್ತವೆ. "ಕುಸುಮಬಾಲೆಯ
ಕ್ಕಮಾದೇವಮ್ಮ" ಅಪ್ಪ ಸತ್ತ ಹನ್ನೆರಡು ತಿಂಗಳಿಗೆ ಹುಟ್ಟಿದನೆಂಬ ಅಪಕೀರ್ತಿಗೆ" ಒಳಗಾದಾಗ
ಗುವನ್ನಿಟ್ಟುಕೊಂಡು ಭಾವ, ಮೈದುನರ ವಿರೋದದಲ್ಲಿಯೂ ಹೊಟೇಲ್ ತೆರೆದು ತನ್ನ ಜೀವನಕ್ಕೆ ದಾರಿ
ಾಡಿಕೊಳ್ಳುತ್ತಾರೆ.

ಕಷ್ಟದ ಹಾದಿಯಲ್ಲಿ ಬದುಕು ರೂಪಿಸಿಕೊಂಡರೂ ಈಕೆ ಜೀತಗಾರನೊಟ್ಟಿಗೆ ಇಟ್ಟುಕೊಂಡಿದ್ದ ಬಂಧ ತನ್ನ ಮಗ ಯಾಡನೊಂದಿಗೆ ನಡೆಸಿದ ಅನ್ಯಾಯದ ಕೆಲಸಗಳು ಇದಾವುದನ್ನೂ ಮುನ್ನೆಲೆಗೆ ದೆ ಮೇಲ್ವವರ್ಗದ ಸಮಾಜ ಆಕೆಯ ಹೊಟೇಲ್‌ನಲ್ಲಿ ತಿಂಡಿ ತಿಂದು ಕಾಫೀ ಕುಡಿದು ಬರುವ ಜೂಕುತನವನ್ನು ತೋರುತ್ತದೆ. ಅಕ್ಕಮಾದೇವಮ್ಮನ ಸ್ಥಾನದಲ್ಲಿ ಒಬ್ಬ ದಲಿತ ಮಹಿಳೆ ಇದ್ದಿದ್ದರೆ ಆಕೆ ಷ್ಟು ಚೆನ್ನಾದ ಬದುಕನ್ನು ಕಟ್ಟಿಕೊಳ್ಳಲು ಮೇಲ್ವರ್ಗ ಸಹಕರಿಸುತ್ತಿರಲಿಲ್ಲ. ಯಾಡ ಯಾಡೇಗೌಡನಾಗಲು ಾಡುವ ಅನ್ಯಾಯಗಳು ಒಂದೆರಡಲ್ಲ".

ಆದರೆ ಯಾಡನ ಅನ್ಯಾಯದ ಕೆಲಸಗಳಾವೂ ಮುನ್ನೆಲೆಗೆ ಬರುವುದೇ ಇಲ್ಲ. ಆತ ಒಬ್ಬ ೂರಿನ ಮುಖಂಡನಾಗಿ ಬೆಳೆಯುತ್ತಾನೆ. ಇಲ್ಲಿ ಅಕ್ಕಮಾದೇವಮ್ಮ ತಮ್ಮ ಮಗನಿಗೆ ಸಮಾಜದಲ್ಲಿ ಉತ್ತಮ ಥಾನ ಗಳಿಸಿಕೊಡುವುದರಲ್ಲಿ ಯಶಸ್ವಿಯಾಗಿದ್ದಾಳೆ. ಒಡಲಾಳದ ಸಾಕವ್ವ "ನೋಡು ಸ್ವಾಮಿ.. ನನ್ನ ೂಮ್ಗೂಸು ನರಲೋಕದಲಿ ರಾಜ್‌ಭಾರ ಮಾಡುವಂಥ ವರಕೊಡು" ಎನ್ನುವಲ್ಲಿ ದಲಿತರು ಉತ್ತಮ ಥಾನಕ್ಕೆ ಹೋಗುವುದು ಕನಸಾಗಿ ಮೂಡುತ್ತದೆ. ಯಾಡನ ಅನ್ಯಾಯಗಳು ಲೆಕ್ಕಕ್ಕೆ ಬಾರದೆ ಅವನೊಬ್ಬ ೀಮಂತ ವ್ಯಕ್ತಿಯಾದರೆ ಹಸಿವನ್ನು ತೀರಿಸಿಕೊಳ್ಳಲು ಎಳೆನೀರನ್ನು ಕಿತ್ತ ತಪ್ಪಿಗಾಗಿ ಗಾರ್‌ಸಿದ್ಮಾವ ಮೇಲ್ವರ್ಗದ ುಂದೆ ಅಪರಾದಿಯಾಗಿ ನಿಂತು ಶಿಕ್ಷೆ ಅನುಭವಿಸುತ್ತಾನೆ. ಗಾರ್‌ಸಿದ್ಮಾವನನ್ನು ಶಿಕ್ಷೆಯಿಂದ ತಪ್ಪಿಸಲು ಲಿತ ಸಂಘರ್ಷ ಸಮಿತಿಯ ನಾಗರಾಜು ಬರುತ್ತಾನೆ.

ಆಗ ಮೇಲ್ವರ್ಗದವರು "ಬಯ್ಯಾ ಮೇಸ್ತ್ರ ನಿಮ್ ಜ್ಯಾತವರ್ಗ ನೀವಸಿ ಬುದ್ಧಿಗಿದ್ದಿ ಹೇಳುದ್ರ ೇಗ್ಲಾರು ಕೇಳಿವ್ಯನ ಅಲ್ಲಾಕಯ್ಯ ಮೇಸ್ತ್ರಾ ನಿಮ್ ಜಾತವು ಊರ್ಲಿ ಇರಮರ್ದ ಮ್ಯಾಗಲ ಎಳ್ನೀರ ಮೊಗರೂ ುಳುಗೊಡ್ಸಲ್ವಲ್ಲಾ ಅದ್ಯಾವಥರ್‍ಸದಲ್ಯೆ ನಾವು ಊರ್ಲಿ ಬಾಳಾದಮಾಡದು" ಎನ್ನುವಲ್ಲಿ ದಲಿತರ ಬದುಕನ್ನು ುಧಾರಿಸುವಲ್ಲಿ ಕಾನೂನು ಚಳುವಳಿಯ ಪಾತ್ರವನ್ನು ಇಲ್ಲಿ ಗಮನಿಸಬಹುದು ಹಾಗೂ ಮೇಲ್ವರ್ಗದವರೂ ಇದರಿಂದ ಕೊಂಚ ಹೆದರುವ ಸಂದರ್ಭವನ್ನು ಗಮನಿಸಬಹುದು ಆದರೆ ಚೊಮನ ಕಾಲಘಟ್ಟದಲ್ಲಿ ಇದಾವುದಕ್ಕೂ ಅವಕಾಶವೇ ಇಲ್ಲದಿರುವುದನ್ನೂ ಗಮನಿಸಬೇಕು. ಚೋಮ ತನ್ನ ಇಡೀ ಬದುಕಿನಲ್ಲಿ ಆಸೆಪಟ್ಟದ್ದು ಯಾಡನಂತೆ ಶ್ರೀಮಂತನಾಗಿ ಮೆರೆಯಲು ಅಲ್ಲ ತನ್ನ ಕುಟುಂಬದ ಎರಡು ಹೊತ್ತಿನ ಗಂಜಿಯನ್ನು ಸ್ವತಂತ್ರವಾಗಿ ಸಂಪಾದಿಸಿಕೊಳ್ಳಲು "ತಾನು ನೆಲವನ್ನು ಉತ್ತು ಬೆಳೆಯಬೇಕೆಂದು ೇಸಾಯಗಾರನಾಗಬೇಕೆಂಬ ಬಯಕೆ" ಆ ಭೂಮಿ ಸ್ವಂತಕ್ಕಲ್ಲ ಗೇಣಿಗೂ ಸಹ ಸಿಗುವುದಿಲ್ಲ. ತನ್ನ ಬದುಕಡೀ ಈ ಆಸೆಗಾಗಿ ಕಷ್ಟ ಪಟ್ಟರೂ ಆಗುವುದಿಲ್ಲ.

ಆತ ದಲಿತನೆಂಬ ಒಂದೇ ಕಾರಣಕ್ಕೆ ಚೋಮನ ಈ ಸಣ್ಣ ಆಸೆಯೂ ಈಡೇರುವುದಿಲ್ಲ. ತಾನು ಡಿದ ಸಣ್ಣ ಸಾಲಕ್ಕಾಗಿ ಮಕ್ಕಳೆಲ್ಲರೂ ಹೋಗಿ ದುಡಿಯಬೇಕಾದ ಪರಿಸ್ಥಿತಿ ಉಂಟಾಗುತ್ತದೆ. ಈ ಣಕ್ಕಾಗಿ ತನ್ನ ಮಗನ ಪ್ರಾಣ ಮಗಳ ಮಾನಗಳನ್ನೂ ಕಳೆದುಕೊಳ್ಳಬೇಕಾಗುತ್ತದೆ. ಯಾಡ ಮಾಡುವ ್ಯಾಯಗಳು ಮನ್ವೇಲ ಬರೆಯುವ ತಪ್ಪು ಲೆಕ್ಕಗಳು ದೊಡ್ಡದಾಗಿ ಕಾಣುವುದೇ ಇಲ್ಲ ಗಾರ್‌ಸಿದ್ಮಾವನು ನೀರು ಕೀಳುವುದು ಚೊಮ ಮಾಡಿದ ಸಣ್ಣ ಸಾಲ ದಲಿತರ ಬದುಕನ್ನೇ ಬಲಿ ತೆಗೆದುಕೊಳ್ಳುವ ಟ್ಟಕ್ಕೆ ತೆಗೆದುಕೊಂಡುಹೋಗುವ ಮೇಲ್ವರ್ಗದ ವರ್ತನೆ ಅಮಾನವೀಯವಾದದ್ದು ಇದನ್ನು ವಿರೋಧಿಸಲು ಂತ್ರ ಪೂರ್ವದಲ್ಲಿ ಅಂಬೇಡ್ಕರ್‌ರವರು ಮಾತ್ರ ದನಿಯೆತ್ತಿದರು" ದಲಿತರನ್ನು ಅಮಾನವೀಯವಾಗಿ ಸಿಕೊಳ್ಳುತ್ತಿರುವ ನಿಮಗೆ ಬ್ರಿಟೀಷರಿಂದ ಸ್ವಾತಂತ್ರ್ಯ ಕೇಳಲು ಹಕ್ಕಿದೆಯೇ?

ಎಂದು ಮೇಲ್ವರ್ಗದವರನ್ನು ಕೇಳುತ್ತಿದ್ದ ಅಂಬೇಡ್ಕರರ ಪ್ರತಿಕ್ರಿಯೆಯನ್ನು ಗಮನಿಸಬಹದು. ಪ್ರಕ್ರಿಯೆಗಳು ಕೇವಲ ಆಕಸ್ಮಿಕವಲ್ಲ ಮತ್ತು ವಯಕ್ತಿಕವೂ ಅಲ್ಲ. ಬದಲಿಗೆ ಮೂಕ ಸಮುದಾಯದ ತರಂಗದ ಅಭಿಪ್ರಾಯಗಳೇ ಆಗಿವೆ. ಚೋಮನ ಈ ರೀತಿಯ ದುರಂತಕ್ಕೆ ಅವನು ಆಸೆಪಟ್ಟಿದ್ದೇ ರಣವೆನ್ನುವಂತೆ ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಚೋಮನಿಗೆ ಅಷ್ಟು ಮಕ್ಕಳಿದ್ದೂ ಅವನಿಗೆ ಅವರ ಗಿನ ಯಾವ ಯೋಚನೆಯೂ ಇಲ್ಲದೆ ಹೆಂಡ ಕುಡಿದು ಮೈಮರೆಯುವುದನ್ನೇ ನೋಡಿದಾಗ ಒಬ್ಬ ಲೆಯನ ಗುಣವೇ ಇಂಥದ್ದು "ಹಾಂ! ಒಂದು ಪಾವು ಅಕ್ಕಿ ಇಷ್ಟು ಬೇಗನೆ ಬಿರುಮನಿಗೆ ಮುಟ್ಟಿ ದರ ರಶೀದಿಯೂ ಬಂದಾಯಿತು" ಎನ್ನುವ ದನಿಯನ್ನು ಈ ಕಾದಂಬರಿ ಪ್ರಕಟಿಸುತ್ತದೆ ಎನಿಸಿದಿರದು.

ಕುಡಿತದ ಚಟದ ಮೂಲಕ ದಲಿತರು ಗಳಿಸುವ ಅಲ್ಪ ಆದಾಯವನ್ನೂ ಈ ಕೈಯಲ್ಲಿ ಕೊಟ್ಟು ಆ ಯಲ್ಲಿ ಕಿತ್ತುಕೊಳ್ಳುವ ತಂತ್ರವನ್ನುನು ಮೇಲ್ವರ್ಗ ಮಾಡುತ್ತಾ ಅವರನ್ನು ಯತಾಸ್ಥಿತಿಯಲ್ಲಿ ಕಾಯ್ದುಕೊಳ್ಳುವಲ್ಲಿ ವ್ಯವಸ್ಥೆ ಯಶಸ್ವಿಯಾಗಿದೆ "ಚೋಮ ಸೆರಗಿರ್‌ಲ್ಲಿದ್ದ ಒಂದು ಸೇರು ಅಕ್ಕಿಯನ್ನು ಎರಡು ದಿನದ ಡಿತನವನ್ನು ಅವನ ಮುಂದೆ ಸುರುವಿದ ಬಿರುಮ ಪೂಜಾರಿ ಬಂದು ಮೊದಲು ಅಕ್ಕಿಯನ್ನು ಅಳೆದು ಗೆ ತೆಗೆದುಕೊಂಡು ಹೋದ, ಹೋಗುವಾಗ" ಏನು ಮೂರು ಪಾವೇ ಸರಿಯೇ?" ಎಂದು ಹೇಳಿಯೂ ೋದ. ಅಂತು ಸಂಕಪ್ಪಯ್ಯನವರು ಕೊಡುವ ಸೇರಿಗೂ ಬಿರುಮನಕೊಳ್ಳುವ ಸೇರಿಗೂ ನಡುವೆ ಅರ್ಧ ವಿನಷ್ಟು ಅಕ್ಕಿ ಹಾರಿಹೋಗುತ್ತಿತ್ತು.

ಒಳಗೆ ಹೋಗಿ ಒಂದು ಸೀಸೆ ಹೆಂಡವನ್ನು ತುಂಬಿಸಿ ತಂದು ಕೊಟ್ಟ ಅಷ್ಟು ಹೆಂಡ ಪೂರ ಇರಲಿಲ್ಲ. ನೀರನ್ನು ಕೊಡಿಸಿ ಅಷ್ಟು ಮಾಡಬೇಕಾಯಿತು" ಎನ್ನುವಲ್ಲಿ ದಲಿತರ ಮೇಲೆ ನಡೆಸುವ ದೌರ್ಜನ್ಯದ ಒಂದು ರೂಪವಾಗಿದೆ.

ನಿಜವಾಗಿ ಇದು ಒಬ್ಬ ಅಸ್ಪಸೃಶ್ಯನ ಸಮಸ್ಯೆಯನ್ನು ಚಿತ್ರಿಸುವ ಕಾದಂಬರಿಯಾದ್ದರಿಂದ ಚೋಮನಿಗೆ ಭೂಮಿಯನ್ನು ಕೊಡಿಸಿಕೊಟ್ಟು ಅವನ ಬೆಳವಣಿಗೆಯನ್ನು ಗುರುತಿಸಿ ತೋರಿಸಬಹುದಾಗಿತ್ತು ಕೃತಿಯ ಸಮಕಾಲೀನ ಸಂದರ್ಭದಲ್ಲಿ ಅಂಬೇಡ್ಕರ್ ದಲಿತರ ಉನ್ನತೀಕರಣಕ್ಕೆ ಹಲವು ಹೋರಾಟಗಳನ್ನು ನಡೆಸುತ್ತಿದ್ದರು ಮತಾಂತರದ ಕುರಿತ ಚರ್ಚೆಗಳು ನಡೆಯುತ್ತಿದ್ದವು ದಲಿತರ ಸಾಮಾಜಿಕ ಹಾಗೂ ಆರ್ಥಿಕ ಸ್ಥಾನಮಾನಗಳ ಕುರಿತು ಅಂಬೇಡ್ಕರ್ ಮಾತನಾಡುತ್ತಿದ್ದರು. ಆದರೆ ಕಾರಂತರು ಅಂತಹ ಸೂಕ್ಷ್ಮ ವಿಚಾರಗಳನ್ನು ಕಾದಂಬರಿಯಲ್ಲಿ ಎಲ್ಲಿಯೂ ಪ್ರಸ್ಥಾಪಿಸುವುದೇ ಇಲ್ಲ. ಇಲ್ಲಿ ಲೇಖಕರ ಮೇಲೆ ಜಾತಿಯ ಪ್ರಭಾವವಿರಬಹುದು "ಭಾಗಶಃ ವಾಸ್ತವವಾದಿ ಕಾದಂಬರಿಗಳೆಲ್ಲವೂ ಯತಾಸ್ಥಿತಿಯ ಮತಿಯಲ್ಲೇ ತಮ್ಮ ಅನನ್ಯತೆಯನ್ನು ಹುಡುಕಲು ತೊಡಗುವುದರಿಂದ ಒಂದೊಂದು ಜಾತಿ, ವರ್ಣ, ಲಿಂಗ ಸಂಬಂಧಗಳ ಚೌಕಟ್ಟನ್ನು ಮೀರಿ ಅನುಭವ ಎನ್ನುವ ಮೂರ್ತ ಸ್ವರೂಪವನ್ನು ಭಗ್ನಗೊಳಿಸಲಾರದೆ ತಟಸ್ಥವಾಗುತ್ತವೆ. ಗತಿಶೀಲತೆಯನ್ನು ಸೃಜನಶೀಲ ಸಂವೇದನೆಯ ಜೊತೆಗೆ ಸಂಯೋಗ ಮಾಡುವಾಗಲೂ ಎಲ್ಲ ಲೇಖಕರಿಗೂ ಸಮಸ್ಯೆಗಳಿವೆ. ಹೀಗಾಗಿ ಕಾರಂತರು ಕೂಡ ಇಂತಹ ಸಂಕೀರ್ಣ ಅವಸ್ಥಾಂತರಗಳಲ್ಲಿ ಚೋಮನನ್ನು ಸೃಷ್ಟಿ ಮಾಡಿದ್ದಾರೆ"ಎನ್ನುವ ಮೊಗಳ್ಳಿ ಗಣೇಶ್‌ರವರ ಮಾತನ್ನು ಒಪ್ಪಬಹುದು ಹಾಗೂ ಲೇಖಕರ ಮೇಲೆ ಹಿಂದೂ ಸಂಪ್ರದಾಯದ ಪ್ರಭಾವವೂ ಇರಬಹುದು ಎನಿಸದಿರದು "ಆಸ್ತಿ – ಪಾಸ್ತಿ ಅಥವಾ ಧನ ಗಳಿಸುವ ಸಾಮರ್ಥ್ಯವಿದ್ದರೂ ಶೂದ್ರನು ಸಂಪತ್ತು ಸಂಗ್ರಹಿಸಬಾರದು ಯಾಕೆಂದರೆ ಅದು ಮುಂದೆ ಬ್ರಾಹ್ಮಣರ ಪೀಡೆಗೆ ಪ್ರೇರಣೆಯಾಗುವುದು" ಮನು ಹೇಳಿದ ಮಾತನ್ನು ಈ ವ್ಯವಸ್ಥೆ ಅಂದಿನಿಂದ ಇಂದಿನವರೆಗೆ ಚಾಚೂ ತಪ್ಪದೇ ಪಾಲಿಸಿಕೊಂಡು ಬಂದಿದೆ ಒಟ್ಟಿನಲ್ಲಿ ಈ ನಿಲುವನ್ನು ಹೀಗೆ ಅರ್ಥಮಾಡಿಕೊಳ್ಳಬಹುದು ಹೊಲೆಯ ತನ್ನ ಹುಟ್ಟಿನ ಮಿತಿಗಳನ್ನು ಮೀರಲು ಹೋಗುವುದರಿಂದ ನೋವನ್ನು ಅನುಭವಿಸುತ್ತಾನೆ. ಆದ್ದರಿಂದ ತನ್ನ ಮಿತಿಯಲ್ಲಿ ಬದುಕಬೇಕು ಎಂಬ ನಿಲುವನ್ನು ಕಾದಂಬರಿಯ ಮೂಲಕ ಲೇಖಕರು ಹೇಳಿದಂತಿದೆ.

"ಜಾತಿ ಜಮೀನ್ದಾರಿ ಪದ್ಧತಿಯ ಒಂದು ಮುಖವಾದರೆ ಲೈಂಗಿಕ ಶೋಷಣೆ ಅದರ ಇನ್ನೊಂದು ಮುಖ ಮಡಿ-ಮೈಲಿಗೆ ಈ ಸಂದರ್ಭದಲ್ಲಿ ಗಣನೆಗೆ ಬರಲಾರದು ಕನ್ನಡದ ಹಲವು ಕಾದಂಬರಿಗಳಲ್ಲಿ ಈ ಮಾತು ನಿಜವಾಗುತ್ತದೆ. ಕೆಳಜಾತಿಯ ಹೆಣ್ಣುಗಳನ್ನು ಮೇಲ್ಜಾತಿಯ ಗಂಡಸರು ಬೋಗದ ವಸ್ತುಗಳಾಗಿ ಪರಿಗಣಿಸುವುದು ಮಾತ್ರವಲ್ಲ ಕೆಳಜಾತಿಯ ಗಂಡುಗಳನ್ನು ಕೂಡ ಮೇಲ್ಜಾತಿಯ ಹೆಣ್ಣು ಬಯಸುವುದನ್ನು ಕಾಣುತ್ತೇವೆ". ಚೋಮನ ಮಗಳು ಬೆಳ್ಳಿ ಇಂತಹ ಕ್ರೂರ ವ್ಯವಸ್ಥೆಗೆ ಬಲಿಯಾಗಿ ಮೇಲ್ವರ್ಗದವರಾದ ಮನ್ವೇಲ ಮಿಂಗೇಲರಿಂದ ಲೈಂಗಿಕ ಶೋಷಣೆಗೆ ಒಳಗಾಗುತ್ತಾಳೆ. ದಲಿತ ಹೆಣ್ಣು ಮಕ್ಕಳನ್ನು ಕಾಮದ ಕಣ್ಣಿನಿಂದ ನೋಡುವ ಇವರಿಗೆ ತಾವು ತುಂಬಾ ಹೀನಾಯವಾಗಿ ನೋಡುವ ದಲಿತ ವರ್ಗಕ್ಕೆ ಸೇರಿದವಳು ಬೆಳ್ಳಿ ಎಂಬ ನೆನಪೂ ಬರುವುದಿಲ್ಲ. ಹಾಗೆಯೇ ದೇವನೂರರ ಮಾರಿಕೊಂಡವರು ಕಥೆಯಲ್ಲಿ ಕಿಟ್ಟಪ್ಪ ಲಕ್ಷ್ಮಿಯನ್ನು ಕೂಡುವ ಸಂದರ್ಭದಲ್ಲಿ ಜಾತಿಯ ಸಮಸ್ಯೆ ಬರುವುದಿಲ್ಲ. ಆ ಸಮಯಕ್ಕೆ ಕಾಮವನ್ನು ತೀರಿಸುವ ಬೋಗದ ವಸ್ತುಗಳಾಗಿ ಮಾತ್ರ ಈ ಹೆಣ್ಣು ಮಕ್ಕಳು ಮೇಲ್ವರ್ಗದವರಿಗೆ ಕಾಣುತ್ತಾರೆ.

ಮೇಲ್ಜಾತಿಯ ಹೆಣ್ಣು ಮಕ್ಕಳು ಕೆಳಜಾತಿಯ ಗಂಡಸರನ್ನು ಆಸೆಪಡುವುದು, ಕೂಡುವುದು ವರ್ಣ ಸಂಕರವೆನಿಸಿಕೊಳ್ಳುತ್ತದೆ. ಚೋಮನದುಡಿಯಲ್ಲಿ ಇಂತಹ ಸಂದರ್ಭಗಳು ಕಾಣದಿದ್ದರೂ ಸಮಕಾಲೀನ ಸಂದರ್ಭದ 'ಮಲೆಗಳಲ್ಲಿ ಮದುಮಗಳು" ಕಾದಂಬರಿಯಲ್ಲಿ ಇದನ್ನು ಗಮನಿಸಬಹುದು "ಅಂತಕ್ಕನ ಮಗಳು ಕಾವೇರಿ ಗುತ್ತಿಯನ್ನು ನೋಡಿ "ಅಸ್ಪೃಶ್ಯ ಜಾತಿಯವನಾದ ಹೊಲೆಯ ಮನುಷ್ಯ ಜಾತಿಯವನಾಗಿದ್ದರೂ ತನ್ನ ಜಾತಿಯೂ ಅಲ್ಲದೆ. ತನಗೆ ಸರಿಸಮ ಜಾತಿಯೂ ಅಲ್ಲದ ಅತ್ಯಂತ ಕೊನೆಯ ಕೀಳು ಜಾತಿಯವನನ್ನು ಹರೆಹರೆಯ ಕೊಂಬಿನ ಹೋರಿ ಮಿಗವನ್ನು ಮೆಚ್ಚಿ ನೋಡುವಂತೆ ನೋಡಿದಳು" ಕಾಮ ಎನ್ನುವುದು ಜಾತಿ, ಧರ್ಮ, ಮತ ಇದಾವುದನ್ನೂ ಲೆಕ್ಕಿಸುವುದಿಲ್ಲ ಎನ್ನುವ ಮಾತಿಗೆ ಈ ಸಂದರ್ಭ ಪುಷ್ಟಿ ನೀಡುತ್ತದೆ. ಕುಸುಮ ಬಾಲೆಯಲ್ಲಿಯೂ ಈ ರೀತಿ ಮೇಲ್ವರ್ಗದ ಹೆಣ್ಣು ಮಕ್ಕಳು ಕೆಳವರ್ಗದ ಗಂಡಸರನ್ನು ಕೂಡುವುದು ಕಂಡು ಬರುತ್ತದೆ. ಈ ಪ್ರಕ್ರಿಯೆ ವರ್ಣ ಸಂಕರದ ಪ್ರತೀಕವಾಗಿದೆ. 12ನೇ ಶತಮಾನದ ವಚನ ಚಳುವಳಿಯ ಈ ಹಿಂದೆ ನಡೆದ ವರ್ಣ ಸಂಕರಕ್ಕೆ ಉತ್ತಮ ಉದಾಹರಣೆಯಾಗುತ್ತದೆ. ಅಕ್ಕಮಹಾದೇವಮ್ಮ ಹಟ್ಟಿಯ ಜೀತರಾರನನ್ನು ಕೂಡಿ ಯಾಡನಿಗೆ ಜನ್ಮ ನೀಡುವುದು, ಸಾವಿತ್ರಿ ದಲಿತ ಯುವಕನೊಂದಿಗೆ ಮದುವೆಯಾಗಿ ಒಂದು ಮಗುವನ್ನು ಪಡೆದು ಜೀವನ ನಡೆಸುತ್ತಿರುವುದು, ಕುಸುಮ ಚನ್ನನನ್ನು ಕೂಡಿ ಆತನಿಂದ ಮಗುವಿನ ತಾಯಾಗಿರುವುದು, ರಾಣಿಯ ಲೈಂಗಿಕ ಪ್ರಕರಣಗಳು ಇವೆಲ್ಲ ವರ್ಣ ಸಂಕರಕ್ಕೆ ಉತ್ತಮ ಉದಾಹರಣೆಗಳಾಗಿವೆ.

ಅಕ್ಕಮಾದೇವಮ್ಮ, ಕುಸುಮ, ರಾಣಿ ಇವರೆಲ್ಲರೂ ಜಾತಿಯ, ಧರ್ಮದ, ಕಟ್ಟಳೆಗಳನ್ನು ಮೀರಿ ಂಕ್ರಮಣಾವಸ್ಥೆಗೆ ತಲುಪಲು ಅಡ್ಡಿಯಾಗಿ ಅಂದಿನ ಕಾಲಘಟ್ಟದ ಬಿಗಿ ವಾತಾವರಣ ಕಾರಣವಿರಬಹುದು. ಂತಹ ಸಂಕ್ರಮಣಾವ್ಯವಸ್ಥೆಗೆ ವಿರುದ್ಧವಾಗಿ ಜಾತಿ ವ್ಯವಸ್ಥೆಯ ಬೇರುಗಳು ಬಲವಾಗಿವೆ. ಹಾಗೆ ಜಾತಿಯ ಟ್ಟಳೆಗಳನ್ನು ಮೀರಿದವರನ್ನು ಮರ್ಯಾದೆ ಹತ್ಯೆಗಳ ಮೂಲಕ ಇಂದಿಗೂ ಕೊಲ್ಲುತ್ತಿರುವ ಜಾತಿಬದ್ಧ ಮಾಜದ ವ್ಯವಸ್ಥೆಯ ಕ್ರೌರ್ಯ ನಮ್ಮ ಕಣ್ಮುಂದಿದೆ. ಚೋಮನದುಡಿಯ ಬೆಳ್ಳಿ ಕುಸುಮಬಾಲೆಯ ೂರಮ್ಮನಂತೆ ಮಾನವೀಯ ನೆಲೆಯುಳ್ಳವಳೂ ಬದುಕಿನ ಬಗೆಗೆ ಬದ್ಧತೆಯುಳ್ಳ ಜವಾಬ್ದಾರಿ ಇರುವ ಣ್ಣಾಗಿದ್ದಾಳೆ. ಸ್ವತಂತ್ರ ಪೂರ್ವದ ಬೆಳ್ಳಿಯ ಅಂದಿನ ಸಮಸ್ಯೆಗಳು ಕೊಂಚ ರೂಪಾಂತರಗೊಂಡು ಂದಿಗೂ ದಲಿತ ಹೆಣ್ಣು ಮಕ್ಕಳು ಅನುಭವಿಸುತ್ತಿದ್ದಾರೆ. ದಲಿತ ಕುಟುಂಬಗಳಲ್ಲಿ ಸಾಮಾನ್ಯವಾಗಿ ಗಂಡಿನಷ್ಟೇ ಮಾನವಾಗಿ ಜವಬ್ದಾರಿಯನ್ನು ಹೊತ್ತು ಮನೆಯ ಒಳಗೆ ಮತ್ತು ಹೊರಗೆ ದುಡಿಯುತ್ತಾರೆ. ಮನೆಯಲ್ಲಿರುವವರಲ್ಲಿ ಮಗಳು ಬೆಳ್ಳಿ, ನಿತ್ಯವೂ ಹೊರಗಿನ ಕೆಲಸಕ್ಕೆ ಹೋಗುತ್ತಾಳೆ. ಆದರೆ ಸಂಜೆಯ ನಕ ಮನೆಯನ್ನು ಬಿಟ್ಟಿರಲು ಅವಳಿಗೆ ಸಾಧ್ಯವಿಲ್ಲ, ಅಡುಗೆ ಕೆಲಸ, ಮಕ್ಕಳ ಆರೈಕೆ, ಎಲ್ಲವೂ ಅವಳಿಂದಲೇ ಾಗಬೇಕು ಆದುದರಿಂದ ಅವಳು ಬೇಗ ಎದ್ದು ಕಾಡಿಗೆ ಹೋಗಿ, ಒಂದು ಹೊರೆ ಸೊಪ್ಪನ್ನು ತಂದು ನ್ನೀ ದನಿಗಳ ಮನೆಯ ಅಂಗಣದಲ್ಲಿ ಕೆಡವಿದಳಾದರೆ, ಮುಖ್ಯ ಕೆಲಸ ಮುಗಿಯಿತೆಂದು ತಿಳಿಯುತ್ತಾಳೆ" ಾದು ನಮ್ಮ ಆದಿಮ ಸಂಸ್ಕೃತಿಯಾದ ಮಾತೃ ಪ್ರಧಾನ ವ್ಯವಸ್ಥೆಯನ್ನು ನೆನಪಿಸುವಂತಿದೆ.

ಆಧುನಿಕ ಯುಗದ ಹೆಣ್ಣು ಮಕ್ಕಳು ಸ್ತ್ರೀವಾದದ ಪ್ರಭಾವದಿಂದ ಸ್ವಾತಂತ್ರ್ಯ ಪಡೆದು ಇಂದು ನಾವು ಮನೆಯ ಹೊರಗೂ ಮನೆಯ ಒಳಗೂ ಗಂಡಿನ ಸಮಕ್ಕೆ ದುಡಿಯುತ್ತಾ ಸ್ವಾವಲಂಬಿಗಳಾಗಿದ್ದೇವೆ ಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದಾರೆ ನಿಜ. ಆದರೆ ವ್ಯವಸ್ಥೆಯ ಮುನ್ನೆಲೆಯಲ್ಲಿ ಕಾಣಿಸಿಕೊಳ್ಳದ ಬೆಳ್ಳಿಯಂತಹ ಅದೆಷ್ಟೋ ಜನ ದಲಿತ ಹೆಣ್ಣು ಮಕ್ಕಳು ಎಂದಿನಿಂದಲೋ ಇವೆಲ್ಲವನ್ನು ನಡೆಸಿಕೊಂಡು ಬಂದಿದ್ದಾರೆ. ಮೇಲ್ಜಾತಿಯ ಎಲ್ಲ ರೀತಿಯ ಶೋಷಣೆಗಳನ್ನು ಸಹಿಸಿಕೊಳ್ಳುತ್ತಾ ತೂರಮ್ಮ ತನ್ನ ಮಗಳ ಮಗುವನ್ನು ಉಳಿಸಿಕೊಳ್ಳುವ ಮಾಟ ಮಂತ್ರ ಜೀವಪರವಾದ ಕಾಳಜಿಯುಳ್ಳದ್ದು "ಆ ಮಾಂಸಾದ ಮುದ್ದೂಗ ಂಡಿದಂಥ ನಾಗರಬೆತ್ತದಲಿ ಮೂರೇಟು ಸವುರಿದಳು ಮೂರೇಟು ಸವುರೀದಾ ತೂರಮ್ಮನಾಗ ಆ ನಾಗಬೆತ್ತಕ ಶರಣೆಂದು ಕಂಕೂಳ ಬಿಗಿತಗುದು ತೂರಮ್ಮ ಹಿಡಿದಳು ಏನನ್ನು ಮರುಜವುಳಿ ಕಡ್ಡಿಯ ಆಮರುಜವುಳಿ ಕಡ್ಡೀಯ ಹಿಡಿದಂಥ ತೂರಮ್ಮನಾಗ ಆಜೀವಾಡೋ ಕಂದನಿಗ ನೀವಳಿಸಿ ಸವುರೂತ ತನ್ನ ಮೊಮ್ಮಗುವಿಗೆ ಯಾವುದೇ ಅಪಾಯವಾಗದಿರಲೆಂದು ಮಾಡಿದ ಆಚರಣೆಗಳು ಇವು 'ಬಾಬ್ ಕಟ್ಟಿನಂತಿದ್ದ ಬಿಳಿಗೂದಲು ರೂಪಕ್ಕೆ ವಸಿಟಚ್ ಮಾಡಿ ತಲೆಗೊಂದು ಕಿರೀಟನಿಗ ಇಟ್ಟುಬುಟ್ಟರ ಆಗ ಅವಳೋ ರಾತ್ರಿನಗ ಕದಮ್ಮಗಳ ಕಾಯ್ವ ಆ ತಾಯಿ ದೇವತೆಯಂತೆ ಇರಲು" ಎಂದು ನಿರೂಪಿಸುವಲ್ಲಿ ತೂರಮ್ಮನ ಅಗಾಧ ಜೀವಪ್ರೀತಿ ಮತ್ತು ಕಾಪಾಡುವ ಶಕ್ತಿಯ ಪ್ರತೀಕವಾಗಿ ನಿಲ್ಲುತ್ತಾಳೆ.

ಮತ್ತು ಪುರಾಣ ಪ್ರಪಂಚದ ಪಾತ್ರವಾಗಿ ಗೋಚರಿಸುವುದು ಅವಳ ಅಗಾಧ ಜೀವಪ್ರೀತಿ ುತ್ತು ಕಾಪಾಡುವ ಪ್ರತೀಕ ತೂರಮ್ಮ ಎನ್ನಬಹುದು. ಈ ರೀತಿಯ ಮಗುವನ್ನು ಉಳಿಸಿಕೊಳ್ಳಲು ಾಡುವ ನೇಮಗಳು ಮಾನವೀಯ ನೆಲೆಯುಳ್ಳವಾಗಿವೆ. ಇಂಥ ಜಾನಪದೀಯ ಆಚರಣೆಯೊಂದು ೋಮನ ದುಡಿಯಲ್ಲಿದೆ ಚನಿಯ ಜಾತ್ರೆಗೆಂದು ಕಾಫಿ ತೋಟದಿಂದ ಊರಿಗೆ ಬಂದಾಗ ಜ್ವರದಿಂದ ುಲಗುತ್ತಾನೆ. ಬೆಳ್ಳಿ ಅಣ್ಣನ ಕಾಯಿಲೆಯ ವಿಚಾರವಾಗಿ ಅಜಿಲ ಚಿನ್ನನಲ್ಲಿಗೆ ಹೋಗುತ್ತಾಳೆ "ಚಿನ್ನ ೊಲೆಯರಲ್ಲಿ ಬ್ರಾಹ್ಮಣ ಹೊಲೆಯನಿದ್ದ ಇತರ ಹೊಲೆಯರಿಗೆ ಮಾಟ, ಮಂತ್ರಗಳನ್ನು ಮಾಡುವ ುರೋಹಿತ", ಬೆಳ್ಳಿ ಅಣ್ಣ ಜ್ವರದ ಕುರಿತಾದ ಒಂದಾಣೆಯನ್ನಿರಿಸಿ ಅವನ ಹತ್ತಿರ ಕೇಳಲು ಹೋಗುತ್ತಾಳೆ. ಅವನು ಏನೆನೋ ಕಡ್ಡಿ, ಕವಡೆ, ಹೂಗಳನ್ನು ತಂದಿರಿಸಿ ಕುಳಿತು, ನಿಂತು, ಮಾಟ ಮಂತ್ರ ಮಾಡಿ, ಳ್ಳೆಯ ಗಂಭೀರ ನುಡಿಯಿಂದ ಪಂಜುರ್ಲಿಭೂತಕ್ಕೆ ನೇಮಕವಾಗಬೇಕು, ಕೊಳಿಯಾಗಬೇಕು, ಂದಿಯಾಗಬೇಕು, ಅಕ್ಕಿಯಾಗಬೇಕು" ಎಂದು ಭೂತದ ಹೆಸರು ಹೇಳಿ ದೊಡ್ಡ ಪಾರುಪತ್ಯ ನಡೆಸುತ್ತಾನೆ. ಅಮಾಯಕ ಜನರನ್ನು ಸುಲಿಯುವ ತಮ್ಮ ಜನಾಂಗವನ್ನೇ ತುಳಿದು ಮೇಲೆ ಬರುವ ಅಜಿಲ ಚೆನ್ನನಂತಹ ಹಲವು ಜನರು ಇಂದಿಗೂ ನಮ್ಮ ಸಮಾಜದಲ್ಲಿದ್ದಾರೆ. ಈ ರೀತಿಯ ವಂಚನೆಗಳು ಇಂದು ಅಧಿಕಾರಿಗಳಾಗಿರುವ ರಾಜಕಾರಣಿಗಳಾಗಿರುವ ಹಲವು ಮಂದಿ 'ನವ ಬ್ರಾಹ್ಮಣರಾಗಿ' ಮೇಲ್ವರ್ಗದವರೊಟ್ಟಿಗೆ ೇರಿಕೊಂಡು ತನ್ನ ಸಮುದಾಯವನ್ನೇ ಶೋಷಿಸುವುದು ಆರೋಗ್ಯಕಾರಿ ಬೆಳವಣಿಗೆಯಲ್ಲ ಮುಂದುವರಿದ ದಲಿತರು ಶೋಷಣೆಗೊಳಗಾದ ತನ್ನ ಸಮುದಾಯವನ್ನು ಮೇಲೆತ್ತುವ ಜವಬ್ದಾರಿಯನ್ನು ಅರಿಯಬೇಕಾಗಿದೆ ಹಾಗೂ ಇಂದಿನ ತುರ್ತಾಗಿದೆ.

ಭಾರತಕ್ಕೆ ಬ್ರಿಟೀಷರು ಮತ್ತು ಕ್ರಿಶ್ಚಿಯನ್ ಧರ್ಮ ಬಂದ ನಂತರ ಇಲ್ಲಿನ ದಲಿತರಲ್ಲಿ ಕೆಲವು ಬದಲಾವಣೆಗಳಾದದ್ದನ್ನೇ ಗಮನಿಸಬಹುದು "ಬಹುಶಃ ಇವರು ಬರದೇ ಹೋಗಿದ್ದಲ್ಲಿ ಇಂದಿಗೂ ನಾನು ಮತ್ತು ನನ್ನಂಥ ದಲಿತರು ಈ ದೇಶದ ನಾಲ್ಕೂ ವರ್ಗದವರ ಹೇಲುಬ್ಬೆಯನ್ನು ತಲೆಯ ಮೇಲೆ ಹೊತ್ತು ಸಾಗಿಸುವ ಕೆಲಸ ತಪ್ಪುತ್ತಿರಲಿಲ್ಲ" ಚೋಮನದುಡಿಯ ಕಾಲಕ್ಕಾಗಲೆ ಮತಾಂತರದ ಪ್ರಕ್ರಿಯೆಗಳು ಇಡೀ ಭಾರತವನ್ನು ವ್ಯಾಪಿಸಿಕೊಂಡಿತ್ತು ಅದು ಕನ್ನಡದ ನವೋದಯದ ಸಂದರ್ಭ ಆದ್ದರಿಂದಲೇ ಆ ಕಾಲಘಟ್ಟದ ಕಾದಂಬರಿಗಳಲ್ಲಿ ಅವರ ಧಾರ್ಮಿಕ ತತ್ವಗಳು ಹಿಂದೂ ಧರ್ಮದ ಎದುರಿಗಿಟ್ಟು ನೋಡುವ ಪ್ರಯತ್ನವನ್ನು ಆ ಕಾಲದ ಕಾದಂಬರಿಗಳಲ್ಲಿ ಕಾಣುತ್ತೇವೆ ಈ ಕಾಲಘಟ್ಟದಲ್ಲಿ ಕಾರಂತರು ಮತ್ತು ಕುವೆಂಪು ಇಬ್ಬರ ಧೋರಣೆಯೂ ಹಿಂದೂ ಧರ್ಮವನ್ನು ರಕ್ಷಿಸುವುದಾಗಿದೆ. "ಚೋಮ, ಮೀಸೆ ಹಣ್ಣಾಗುವ ತನಕ ನನ್ನನ್ನು ನಂಬಿ ಬಂದು ಈಗ ಸಾಯುವ ಮೂರು ದಿನಕ್ಕೆ ಮುಂಚೆ ನನ್ನನ್ನು ಬಿಟ್ಟು ಪಾದ್ರಿಯ ಹಿಂದೆ ಓಡುತ್ತಿಯೋ" ಕಾರಂತರು ಪಂಜುರ್ಲಿಯ ಮರೆಯಲ್ಲಿ ನಿಂತು ಹಿಂದೂ ಧರ್ಮವನ್ನು ರಕ್ಷಿಸಿದರೆ ಕುವೆಂಪು ಮದುಮಗಳು ಕಾದಂಬರಿಯ ಅನೇಕ ಸನ್ನಿವೇಶಗಳಿಂದಲೇ ಸೂಚಿಸುತ್ತಾರೆ.

ಕುವೆಂಪು ಶೂದ್ರರ ಕುರಿತಾಗಿ ಯೋಚಿಸುತ್ತಾರೆ. "ಬ್ರೀಟಿಷರು ಬರದಿದ್ದಲ್ಲಿ ನಾವು ಮೇಲ್ವರ್ಗದವರ
ಮನೆಯಲ್ಲಿ ಸಗಣಿ ಬಾಚುತ್ತಿದ್ದೆ" ಎನ್ನುವ ಕುವೆಂಪು ದಲಿತರನ್ನು ಯತಾಸ್ಥಿತಿಯಲ್ಲಿಯೇ ನೋಡಿದ್ದಾರೆ
ಎಂಬ ಪ್ರೋ. ಬಿ. ಕೃಷ್ಣಪ್ಪನವರ ಮಾತನ್ನು ಇಲ್ಲಿ ಸಮರ್ಥಿಸಬಹುದು ಧರ್ಮವನ್ನು ರಕ್ಷಿಸಿಕೊಳ್ಳುವಲ್ಲಿ
ನವೋದಯದ ಕಾಲದಲ್ಲಿ ನಡೆದ ಸಾಹಿತ್ಯಕ ಪ್ರಯತ್ನಗಳಿವು ಎನ್ನಬಹುದು.

ಗುರುವ ಮತಾಂತರಗೊಂಡು ದಲಿತನಾಗಿದ್ದಾಗಿನ ತನ್ನ ಶೋಚನೀಯ ಬದುಕಿನಿಂದ ಕೊಂಚ
ಬಿಡಿಲಗೊಂಡವನಂತೆ ಕಾಣುತ್ತಾನೆ. "ಮತ ಪ್ರಚಾರವು ಕ್ರಿಶ್ಚಿಯನ್ ಆಧುನಿಕತೆಯ ಮುಖ್ಯ ಉದ್ದೇಶವಾಗಿದ್ದರೂ,
ಎಂಬ ಸಲ ಇದನ್ನು ಮೀರಿ ಅದು ಈ ದೇಶದ ಅಪಮಾನಿತ ಜನ ಸಮೂಹವನ್ನು ಹಲವು ಬಗೆಯ
ದುಃಖಗಳಿಂದ ಪಾರುಗೊಳಿಸಿದೆ. ಶಾಲೆ ಕಲಿಯಬಾರದು, ಶುಚಿಯಾಗಿರಬಾರದು, ಭೂಮಿ ಉಳುಮೆ
ಮಾಡಬಾರದು ಮುಂತಾದ ಅನ್ಯಾಯದ ನಿಯಮಗಳನ್ನು ಮುರಿಯಲು ಕೆಳವರ್ಗಗಳಿಗೆ ಅವಕಾಶ ಸಿಕ್ಕಿದೆ.
ಜೀವನ ಸ್ಥಿತಿ ಸುಧಾರಣೆಯಾಗಿದೆ. ದನಿಯರ ಮನೆಯ ಜೀತದ ಶಿಕ್ಷೆ ತಪ್ಪಿದೆ. ಕುಸುಮಬಾಲೆಯಲ್ಲಿ ಜೀತ
ವಿಮೋಚನಾ ಚಳುವಳಿ ಸ್ವಾತಂತ್ರ್ಯಾನಂತರ ದಲಿತರು ಶಿಕ್ಷಣವನ್ನು ಪಡೆದು ಕಾನೂನನ್ನು ಅರಿತು ತಮ್ಮ
ವಿಮೋಚನೆಗೆ ಪ್ರಯತ್ನಿಸುತ್ತಿದ್ದ ಕಾಲಘಟ್ಟದಲ್ಲಿ ನಡೆದದ್ದು ಇಲ್ಲಿನ ದಲಿತರನ್ನು ಧರ್ಮದ ಕಟ್ಟಳೆಯಲ್ಲಿ
ಬಂದಿಸಿ ವ್ಯವಸ್ಥೆಯನ್ನು ಕಾಪಾಡಿಕೊಂಡು ಹೋಗಲು ಇಲ್ಲಿನ ಮೇಲ್ವರ್ಗಗಳು ಪ್ರಯತ್ನಿಸಿದರೂ ಸಾಧ್ಯವಾಗದೇ
ಜೀತ ವಿಮೋಚನಾ ಚಳುವಳಿಯನ್ನು ಮೂದಲಿಸಿ ತಮ್ಮ ಅಸೂಯೆಯನ್ನು ಹೊರಹಾಕುತ್ತಾರೆ "ಇನ್ನ್ಯಾನ
ಮಾಡೋದು ಬುದ್ಯೋ ನಿಂ ಜಾತ್ಯವರೆಲ್ಲಾ ನಾಳರೆಂದ್ಲಿಯ ಜೀತ ಬುಟ್‌ಬುಟ್ಟರಂತಲ್ಲಾ "ಜೀತ ಬುಟ್‌ಮ್ಯಾಲ
ಹೊಲಾರ್ನೇನ ಮಾತಾಡ್ಸಕ ಆದ್ದಯ್ಯ! ಯಾನಾರೂ ನೋಡಾಕ ಆದ್ದಯ್ಯ! ಆಗ ಹೊಲಾರು ಅನ್ನ
ಕುಪ್ಪನಿಯಕಯ್ಯೋ ಉಣ್ಣಾದು" ಜೀತವನ್ನು ಬಿಟ್ಟು ಸಣ್ಣಪುಟ್ಟ ಸ್ವ ಉದ್ಯೋಗಗಳಲ್ಲಿ ತೊಡಗಿದ ಅಮಾಸ
ಬಟ್ಟಯ್ಯನಂತವರನ್ನು ಕಂಡಾಗಲೂ ಮೇಲ್ವರ್ಗ ಸಹಿಸಲಾರದ ಅಸೂಯೆಯನ್ನೇ ವ್ಯಕ್ತಪಡಿಸುತ್ತದೆ. ಅಮಾಸ
ತನ್ನ ಕೆಲಸದ ನಿಮಿತ್ತ ಸೈಕಲ್ ಮೇಲೆ ಬರುತ್ತಿರುವಾಗ "ನೋಡ್ರುಡಾ ನೋಡ್ರುಡಾ! ಹೊಟ್ಟಗ ಹಿಟ್ಟು ಇದ್ರೂ
ಆ ಹೊಲೆನ್‌ಕೊಬ್ಬು! ನಾವ್ ನೋಡ್ಲಿ ಅಂತಿಯ ಹಾವ್ನ ತರ್ವಾಗಿ ನಲೀತಾ ಬತ್ತಾ ಅವ್ನಲ್ಲಾ ! ಬಡ್ಡೇದ್ನಗ
ಆಹ್ಯಾಂಡಲ್ನೆ ಹಿಡ್ಕಳಕ ಆಗಬಾರ್ದು.. ಆ ಥರ್ವಾಗಿ ಅವ್ನ ಆ ಏಡು ಮುಂಗೈನಿಗ ಕತ್ತರ್ಸಿ ಅತ್ತಾಗೊಂದು
ಇತ್ತಾಗೊಂದು ಎಸ್ದ್‌ಬುಟ್ರಿಗಪ್ಪಾ.. '* ಎನ್ನುವಲ್ಲಿ ದಲಿತರ ಏಳಿಗೆಯನ್ನೇ ಸಹಿಸದ ಮೇಲ್ವರ್ಗದ ಆಕ್ರೋಶವನ್ನು
ಕಾಣಬಹುದು. ಚೋಮನ ದುಡಿಯ ಕಾಲಘಟ್ಟದ ದಲಿತರ ಸ್ಥಿತಿಗತಿಗಳು ಸ್ವಾತಂತ್ರ್ಯ ನಂತರ ಸಂವಿಧಾನದಲ್ಲಿರುವ
ಹಲವು ಕಾನೂನುಗಳು ಮತ್ತು ಮೀಸಲಾತಿಯ ಉಪಯೋಗ ಪಡೆದ ದಲಿತರ ಸ್ಥಿತಿಗತಿಗಳಲ್ಲಿ ಆದ
ಬದಲಾವಣೆಯನ್ನು ಸಹಿಸಿಕೊಂಡು ಬರಿ ಮೂದಲಿಸುವ ನಾಟಕವಾಡುವ ಮೇಲ್ವರ್ಗಗಳು ಸಮಯ
ಸಾಧಿಸಿ ಕಾನೂನು ಸೇರಿದಂತೆ ಯಾರಿಗೂ ಅರಿವಾಗದ ರೀತಿಯಲ್ಲಿ ಚನ್ನನಂತಹ ಅಮಾಯಕರನೇ
ಕೊಂದು ಏನೂ ತಿಳಿಯದಂತೆ ನಾಜೂಕುತನವನ್ನು ಪ್ರದರ್ಶಿಸುವಂತಹ ಸೋಮಪ್ಪನಂತಹ ಮೇಲ್ವರ್ಗ
ಇಂದಿಗೂ ದಲಿತರನ್ನು ಬಲಿತೆಗೆದುಕೊಳ್ಳುವಲ್ಲಿ ಯಶಸ್ವಿಯಾಗುತ್ತಿದೆ.

## ಕೊನೆ ಟಿಪ್ಪಣಿ :


ದಲಿತ ಅಧ್ಯಯನ – ಸಂಪಾದಕ ಡಾ. ಟಿ. ಆರ್. ಚಂದ್ರಶೇಕರ
– ಪ್ರಕಾಶನ – ಕನ್ನಡ ವಿಶ್ವವಿದ್ಯಾನಿಲಯ,
ಮುದ್ರಣ – ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು – 2005 – ಪುಟ–266

ಚೋಮನ ದುಡಿ – ಡಾ॥ ಕೆ. ಶಿವರಾಮ ಕಾರಂತ,
– ಪ್ರಕಾಶಕರು : ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್
ಬೆಂಗಳೂರು – 2010 – ಪುಟ–12

ಅದೇ ------------"---------- ಪುಟ –7

ಅದೇ ------------"---------- ಪುಟ –3

ದೇವನೂರು ಮಹದೇವರ ಆಯ್ದ ಕತೆಗಳು – ಕೆ.ವಿ. ಸುಬ್ಬಣ್ಣ ನೆನಪಿನ
ಮೊದಲೋದ ಮಾಲಿಕೆ – ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ ಪುಟ–59.

ಅದೇ ------------"---------- ಪುಟ–38

ಅದೇ ------------"---------- ಪುಟ –54

ಕುಸುಮ ಬಾಲೆ –ದೇವನೂರು ಮಹಾದೇವ
--ಅಭಿನವ ಪ್ರಕಾಶನ, ಬೆಂಗಳೂರು – 2002 ಪುಟ –15

ಅದೇ ------------"---------- ಪುಟ –46

ಪ್ರತಿ ಸಂಸ್ಕೃತಿ – ಡಾ॥ ರಹಮತ್ ತರಿಕೆರೆ
– ಇಳಾ ಪ್ರಿಂಟರ್ಸ್, ಬೆಂಗಳೂರು,
ಕನ್ನಡ ಸಂಘ ಕ್ರೈಸ್ಟ್ ಕಾಲೇಜು ಪುಟ – 68 – 69

ಚೋಮನದುಡಿ – ಶಿವರಾಮಕಾರಂತ
– ಪ್ರಕಾಶಕರು ಎಸ್.ಬಿ.ಎಸ್. ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, ಬೆಂ–2010 ಪುಟ –12

ಅದೇ ------------"---------- ಪುಟ –23

ದಲಿತ ಕಥನ – ಡಾ॥ ಮೊಗಳ್ಳಿ ಗಣೇಶ್ – ಪ್ರಸಾರಾಂಗ, ಹಂಪಿ ವಿ.ವಿ.
– ವಿಶ್ವಾಸ್ ಪ್ರಿಂಟರ್ಸ್, ಬೆಂಗಳೂರು. ಪುಟ – 18

ಚಾತುರ್ವರ್ಣ ಧರ್ಮ ದರ್ಶನ – ಮನು 10/126 ಪುಟ – 2

ಕನ್ನಡ ಕಾದಂಬರಿಗಳಲ್ಲಿ ಅಸ್ಪೃಶತೆಯ ಸಮಸ್ಯೆ ಲಿಂಗರಾಜು,
– ಎಂ.ಫಿಲ್. ಪ್ರಬಂಧ, ಬೆಂಗಳೂರು ವಿ.ವಿ. – 1990 ಪುಟ. 11

. ಮಲೆಗಳಲ್ಲಿ ಮದುಮಗಳು ಕುವೆಂಪು – ಮೈಸೂರು 1974/
– 2ನೇ ಮುದ್ರಣ ಪುಟ – 53

. ಚೋಮನದುಡಿ – ಡಾ. ಕೆ.ಶಿವರಾಮಕಾರಂತ
– ಪ್ರಕಾಶಕರು ಎಸ್.ಬಿ.ಎಸ್. ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, ಪುಟ –8

. ಅದೇ ————————”—————— ಪುಟ –60

. ಕುಸುಮಬಾಲೆ, ದೇವನೂರು ಮಹದೇವ
– ಪುಸ್ತಕ ಪ್ರಕಾಶನ, ಮೈಸೂರು – 1988–2009 ಪುಟ –60

0. ಅದೇ ————————”—————— ಪುಟ –63

1. ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ – ಅರವಿಂದ ಮಾಲಗತ್ತಿ,
– ಮುದ್ರಣ ಬಿ.ಎಂ.ಶ್ರೀ ಅಚ್ಚುಕೂಟ, ಕನ್ನಡ ಸಾಹಿತ್ಯ
ಪರಿಷತ್ತು, ಬೆಂಗಳೂರು – 2003 ಪುಟ –72.

2. ಚೋಮನದುಡಿ – ಡಾ॥ ಕೆ. ಶಿವರಾಮ ಕಾರಂಕತ ಪುಟ – 101

3. ಪ್ರತಿ ಸಂಸ್ಕೃತಿ ಡಾ॥ ರಹಮತ್ ತರಿಕೆರೆ
– ಇಳಾ ಪ್ರಿಂಟರ್ಸ್, ಬೆಂಗಳೂರು ಕನ್ನಡ ಸಂಘ
ಕ್ರೈಸ್ಟ್ ಕಾಲೇಜು, ಬೆಂಗಳೂರು ಪುಟ – 49

4. ಕುಸುಮ ಬಾಲೆ ಕಾದಂಬರಿ ದೇವನೂರು ಮಹಾದೇವ ಪುಟ – 77

5. ಅದೇ ಪುಸ್ತಕದಿಂದ ಪುಟ – 43.

16. ಒಡಲಾಳ – ದೇವನೂರು ಮಹಾದೇವ – ಅಭಿನವ ಪ್ರಕಾಶನ ಪುಟ – 54.

# ಚೋಮನ ದುಡಿ ಮತ್ತು ಕುಸುಮ ಬಾಲೆಯಲ್ಲಿನ ತಂತ್ರ

ಕುಸುಮಬಾಲೆ ಗಾತ್ರದಲ್ಲಿ ಕಿರಿದಾದ ಕಾದಂಬರಿಯಾದರೂ ಅದರ ಸತ್ವ ಮತ್ತು ತಂತ್ರದಿಂದಾಗಿ ಬಹುದೊಡ್ಡ
ಬರಿಯಾಗಿದೆ. ಕಾವ್ಯದ ಪರಿಭಾಷೆಯ ಬೆಡಗಿನಲ್ಲಿ ಪ್ರತಿಮೆ ರೂಪಕಗಳಲ್ಲಿ ಬೆಳೆದು ನಿಲ್ಲುವ ಈ ಕೃತಿ
ದು ತಲೆಮಾರುಗಳ ಕಥೆಯನ್ನು ತನ್ನ ಒಡಲಿನಲ್ಲಿಟ್ಟುಕೊಂಡಿದ್ದು ನಿರೂಪಣಾ ವಿದಾನ, ಶೈಲಿ, ಭಾಷಾಪ್ರಯೋಗ,
ೋರಣೆಗಳಲ್ಲಿ ಕನ್ನಡ ಕಾದಂಬರಿ ಕ್ಷೇತ್ರದಲ್ಲೇ ವಿಶಿಷ್ಟವಾಗಿ ನಿಲ್ಲುತ್ತದೆ.

ಇಡೀ ಕಾದಂಬರಿಯ ಹಂದರ ಸುಪ್ತ ಪ್ರಜ್ಞೆಯಲ್ಲಿ ಅಡಗಿರುವ ಕನಸುಗಳ ಜಾನಪದ ಶೈಲಿಯಲ್ಲಿ ಕಥೆ
ಪಿತವಾಗಿದೆ. ಮಹದೇವರವರಿಗೆ ಜನಪದ ಶೈಲಿಯಿಂದ ಶಿಷ್ಟ ಶೈಲಿಕೆ ಜಂಪ್ ಮಾಡಲು ವಿವರವಾಗಿ
ಬೇಕಾದ್ದನ್ನು ಸಂಕ್ಷಿಪ್ತವಾಗಿ ಹೇಳಲು ಜನಪದ ಹಾಡಿನ ಶೈಲಿಯನ್ನು ಉಪಯೋಗಿಸಿಕೊಂಡಿರುವುದು
ನಿರೂಪಣಾ ತಂತ್ರಗಳಲ್ಲಿ ಒಂದಾಗಿದೆ. ಕಥೆಯ ನಿರೂಪಣೆ ಒಂದು ಕ್ರಮದಲ್ಲಿಲ್ಲ. ಎಲ್ಲ ವಿವರಗಳನ್ನು
ನುಕ್ರಮಣಿಯಲ್ಲಿ ಸರಳ ರೇಖಾತ್ಮಕವಾಗಿ ವಿರೂಪಿಸಿಲ್ಲ. ಇಲ್ಲಿ ವರ್ತಮಾನದಲ್ಲಿ ಕೆಲವು ಘಟನೆಗಳು
ರೆ ಭೂತದಲ್ಲಿ ಎಷ್ಟೋ ಘಟನೆಗಳು ನಡೆಯುತ್ತವೆ. ಇಲ್ಲಿನ ನಿರೂಪಣೆಗಳಲ್ಲಿ ವೈವಿದ್ಯವಿದೆ. ಅಲ್ಲೊಬ್ಬ
ಶ್ಯ ನಿರೂಪಕನಿದ್ದಾನೆ. ಕೆಲವೊಮ್ಮೆ ಪಾತ್ರಗಳ ಮೇಲೆ ಆದಿಭೌದಿಕ ಶಕ್ತಿಗಳು ಆವಾಹನೆಯಾಗಿ ನಿರೂಪಣೆ
ಧ್ಯಮಗಳ ಮೂಲಕ ನಡೆಯುತ್ತದೆ.

ಗದ್ಯ, ಕಾವ್ಯ, ಜಾನಪದ, ಶಿಷ್ಟಗಳೆರಡರಿಂದಲೂ ದೊರಕಿಸಿಕೊಂಡ ಕಥನ ಕ್ರಮಗಳು ಕಥಾ ನಿರೂಪಣಾ
ಕ್ಕೆ ವೈವಿದ್ಯವನ್ನು ಒದಗಿಸಿವೆ. ವರ್ತಮಾನ ಭೂತಗಳ ಕರಾರುವಕ್ಕಾದ ವಿಭಜನೆ ಇಲ್ಲಿಲ್ಲ. ಎಲ್ಲೆಲ್ಲೊ ಹರಡಿಹೋದ
ನೆಗಳನ್ನು ನೆನಪುಗಳನ್ನು, ಕನಸುಗಳನ್ನು ಪ್ರಜ್ಞಾಪೂರ್ವಕವಾಗಿ ಜೋಡಿಸಿಟ್ಟರೆ ಕಥೆ ಅರ್ಥವಾಗುತ್ತದೆ. ಈ
ಪಣಾ ತಂತ್ರವನ್ನು ಅರಿತು ಓದಿದಾಗ ಕಾದಂಬರಿ ಮತ್ತಷ್ಟು ರುಚಿಸುತ್ತದೆ.

ಒಂದು ಕಾವ್ಯ ಓದಿನಂತೆ ಅಥವಾ ಜಾನಪದ ಕಥಾನಕದಂತೆ ಈ ಕಾದಂಬರಿಯನ್ನು ಆಸ್ವಾದಿಸಬಹುದು
ರೆಯಾಗಿ ದಲಿತ ಸಂವೇಧನೆಗಳೇ ಈ ಕಾದಂಬರಿಯ ಹಿಂದೆ ಮತ್ತು ಮುಂದೆ ಕೆಲಸ ಮಾಡಿವೆ. ಕೊಲಾಜ್
ಗಳಂತೆ ತುಣುಕು, ತುಣುಕುಗಳಾಗಿ ಆರಿಸಿಕೊಳ್ಳಬಹುದಾದ ತಂತ್ರವಾಗಿ ನಿರೂಪಿತವಾಗಿದೆ.

ಕಥೆಯ ಹಂದರವನ್ನು ವರ್ಣ, ವರ್ಗ, ಸಂಘರ್ಷಗಳನ್ನು ಕಲಿತವರು ದಲಿತರ ನಡುವಿನ ವೈದೃಶ್ಯಗಳನ್ನು
ತರ ಬದುಕಿನ ನಾನಾ ಚಿತ್ರಣಗಳನ್ನು ಪೋಣಿಸಿ ಬಳಸಲಾಗಿದೆ. ಹಳೆಯ – ಹೊಸತರ, ಪರಂಪರೆ –
ನಿಕತೆ, ಪ್ಯಾಂಟಿಸಿ – ವಾಸ್ತವ ಸಂಘರ್ಷ, ಸಾಮರಸ್ಯ – ವೈದೃಶ್ಯಗಳ ಚಿತ್ರಣವನ್ನು ಕಾಣಬಹುದಾಗಿದೆ.

ಕುಸುಮಬಾಲೆ ಕಥೆ ಹೇಳುವ ಉದ್ದೇಶದಿಂದ ಹೊರಟ ಕಾದಂಬರಿ ಅಲ್ಲ. ಆ ಕಾದಂಬರಿಕಾರನಿಗೆ
ವ ಫಾರ್ಮ್‌ನ ಹಂಗೂ ಇಲ್ಲ. ಒಟ್ಟಾರೆಯಾಗಿ ದಲಿತ ಸಮುದಾಯದ ಸ್ಥಿತಿಗತಿಗಳನ್ನು ಕೆಲವು
ವಗಳನ್ನು ಆಶೋತ್ತರಗಳನ್ನು ಕನಸು ನನಸುಗಳನ್ನು ನೋವು ನರಳಾಟಗಳನ್ನು, ದಲಿತರಿಗೆ
ರ್ಗದವರಿಂದ ಆಗುವ ಹಿಂಸೆ, ಶೋಷಣೆ, ತಲ್ಲಣಗಳನ್ನು ಹಿಡಿದಿಡುವ ಮತ್ತು ದಲಿತರು ಹಿಡಿಯಬೇಕಾದ
ಯನ್ನು ಸೂಚಿಸಲು ದಲಿತರ ಇತಿಹಾಸವನ್ನು ಹೇಳಲು ದಲಿತರ ಬದುಕಿಗೆ ಘನತೆಯನ್ನು ತರಲು
ತ್ನಿಸುವ ಕಾದಂಬರಿ ಇದಾಗಿದೆ. ಜಾನಪದ ಅಂಶವನ್ನು ಒಳಗೊಂಡಿರುವ ಜಾನಪದ ಕಥಾನಕ,
ಪಣೆ ಮಾರ್ಗವನ್ನು ತಂತ್ರವಾಗಿ ಬಳಸಲಾಗಿದೆ.

ಕೃತಿಯ ಆರಂಭದಿಂದ ಕೊನೆಯವರೆಗೂ ಒಂದು ಬಗೆಯ ಜಾನಪದೀಯ ಅನಾವರಣವನ್ನು
ಸಿಕೊಂಡು ಮುನ್ನಡೆಯುವ ಮೂಲಕ ತನ್ನೊಡಲ ಜೀವಸ್ವರವನ್ನು ಜನತದಿಂದ ಕಾಪಾಡಿಕೊಳ್ಳುವ
ಗಾರಿಕೆಯನ್ನು ಅನುಸರಿಸುವಂತೆ ಕಾಣುತ್ತದೆ. ಮಾನವೀಯ ನೆಲೆಯ ಸಮಾನತೆ ಅಂಶವನ್ನು ಸ್ಫುರಿಸುವ
ತಿ ಗಮನಕ್ಕೆ ಬಾರದಿರದು.

ಕಾದಂಬರಿಯನ್ನು ಪ್ರವೇಶಿಸುತ್ತಾ ಹೋದಂತೆ ಇಂತಹ ಹಲವಾರು ತಂತ್ರಗಳು ಕಾಣಸಿಗುತ್ತವೆ. ಈ
ತ್ರಗಳನ್ನು ಒಂದೊಂದಾಗಿ ಪರಿಶೀಲಿಸಬಹುದಾಗಿದೆ. ಪ್ರಾರಂಭದಲ್ಲಿ ಊರಿನ ಎಲ್ಲರ ಹಟ್ಟಿಗಳ ಜ್ಯೋತಮ್ಮಗಳು
ಸುಖ ಮಾತನಾಡಿಕೊಳ್ಳಲು ಊರ ಮುಂದಿನ ಕತ್ತಲಿನಲ್ಲಿ ಕೂಡಿದರು ಅವರು ಕೂಡಿದ ಸಮಯವನ್ನೇ
ಂಬರಿಕಾರರು ವಿಶೇಷವಾಗಿ ಹೇಳುತ್ತಾರೆ. "ಕಲ್ಲು, ನೀರು ಕರಗುತ್ತಿತ್ತು" ಈ ಕಲ್ಲು, ನೀರು ಕರಗುವ
ಯವೆಂದರೆ ಇಡೀ ಭೂಲೋಕದ ಎಲ್ಲ ಪ್ರಾಣಿ ಪಕ್ಷಿಗಳು ಮಲಗಿ ನಿದ್ರಿಸುವ ಹೊತ್ತು. ಈ ಸಮಯದಲ್ಲಿ
ನುಷ್ಯನ ಯಾವುದೇ ವ್ಯವಹಾರಗಳಿಲ್ಲದೆ ಕಲ್ಲೂ ಸಹ ಕರಗುವಂತಹ ಮೌನವಾದ ಮದ್ಯರಾತ್ರಿಯ ಸಮಯ.

ಜೋತಮ್ಮದೇರು ಊರ ಮುಂದೆ ಸೇರಿರುವುದು ಕಷ್ಟ ಸುಖ ಮಾತನಾಡಲು ಎಂದು ಹೇಳುವ ದಂಬರಿಕಾರರು ಅವರ ಬಾಯಲ್ಲಿ ಕುಸುಮಾಳ ಪರಿಚಯವನ್ನು ಮಾಡಿಸುತ್ತಾರೆ. ಅವಳ ಚೆಲುವನ್ನು, ವಳ ನಗುವಿನ ರೀತಿಯನ್ನು ಹೇಳಿಸುತ್ತಾರೆ. ಕುಸುಮಾಳಿಗೂ ಹೊಲಾರ ಚನ್ನನಿಗೂ ಇದ್ದ ಸಂಬಂಧವನ್ನು ಸಂಭಂದದ ಫಲವಾಗಿ ಹುಟ್ಟಿದ ಮಗುವಿನ ರೂಪವನ್ನು ಆ ರೂಪವನ್ನು ನೋಡಿ ಕುಸುಮಾಳ ಗಂಡ ೋಪಿಸಿಕೊಂಡು ಹೋದದ್ದನ್ನು ಕುಸುಮಾಳು ಈಗ ಇರುವ ಪರಿಸ್ಥಿತಿಯನ್ನು ಪರಿಚಯಿಸುವಲ್ಲಿ ೋತಮ್ಮದೀರನ್ನು ಬಳಸಿಕೊಂಡಿರುವ ರೀತಿ ವಿಶಿಷ್ಟವಾಗಿದೆ.

ಕಥೆಯ ನಿರೂಪಣೆಯನ್ನು ನೇರವಾಗಿ ನಿರೂಪಕ ಅಥವಾ ಅಲ್ಲಿನ ಮಾನವ ಪಾತ್ರಗಳ ಮೂಲಕ ಾಡುವ ಬದಲಾಗಿ ಜ್ಯೋತಮ್ಮದೀರ ಮೂಲಕ ಹೇಳಿಸುವ ತಂತ್ರವನ್ನು ಬಳಸಲಾಗಿದೆ. ಹಾಗೂ ್ಯೋತಮ್ಮದೀರು ಯಾವ ಪಕ್ಷಪಾತವೂ ಇಲ್ಲದೆ ನಡೆದ ಸಂಗತಿಗಳನ್ನು ಯತಾವತ್ತಾಗಿ ಮಾತನಾಡಿಕೊಳ್ಳುವ ೀತಿಯನ್ನು ಕಾಣಬಹುದು ಹಾಗೂ ದಲಿತರ ಸುಪ್ತ ಸಂವೇದನೆಗಳನ್ನು ಪ್ರತಿನಿಧಿಸುವ, ದಲಿತರಲ್ಲಿ ್ವಾಭಿಮಾನವನ್ನು ತುಂಬಲು ಯತ್ನಿಸುವ ಸಲಕರಣೆಗಳನ್ನಾಗಿ ಉಪಯೋಗಿಸಿಕೊಳ್ಳಲ್ಪಟ್ಟಿವೆ.

"ಈ ಕಲಿಗಾಲದ ಜನಕ್ಕೆಲ್ಲ ವೇಳ ಅವೇಳ ಅಂಬುದಿಲ್ಲದೆ" ಎನ್ನುವ ಜ್ಯೋತಮ್ಮಗಳ ಮಾತಿನಲ್ಲಿ ಧುನಿಕತೆ, ನಾಗರೀಕತೆಯ ಹೆಸರಿನಲ್ಲಿ ಹಗಲುರಾತ್ರಿಗಳೆನ್ನದೆ ಪ್ರಕೃತಿಯ ಮೇಲಿನ ದೌರ್ಜನ್ಯ, ಆಧುನಿಕತೆಯ ೆಸರಿನ ಅನಾಚಾರಗಳನ್ನು ಬಿಂಬಿಸುವಂತಿದೆ.

ಮತ್ತೊಂದು ನಿರೂಪಣಾ ತಂತ್ರವಾಗಿ ಮಂಚದ ಕಥೆಯನ್ನು ಗಮನಿಸಬಹುದು. ಇದು ವಿಕ್ರಮಾದಿತ್ಯನ ಂಹಾಸನದ ಮೇಲಿನ ಬೊಂಬೆ ಹೇಳಿದ ಕಥೆಯನ್ನು ಜ್ಞಾಪಿಸುತ್ತದೆ. ಮಂಚ ತನ್ನ ಕಥೆಯನ್ನು ಹೇಳುತ್ತಲೇ ಂದಿನ ಕಾಲದ ರಾಜಪ್ರಭುತ್ವದ ವಿಲಾಸ ಜೀವನದ ಪರಿಯನ್ನು ಮತ್ತು ಅದರ ಅವನತಿಯನ್ನು ರಾಣಿಯಂಥವರ ್ವೇಚ್ಛ ಬದುಕಿನ ಸ್ವರೂಪವನ್ನು ಹಾಗೂ ಪ್ರಜಾಪ್ರಭುತ್ವ ಕಾಲದ ಯಾಡೇಗೌಡನಂಥವನ ಬದುಕಿನ ರೀತಿ ೀತಿಗಳನ್ನು ಖೋಟಾನೋಟಿನ ವ್ಯವಹಾರದಲ್ಲಿ ಆತ ಶ್ರೀಮಂತನಾದ ಬಗೆಯನ್ನು ನಿರೂಪಿಸುತ್ತದೆ. ಹೀಗೆ ಮಂಚದ ಆತ್ಮಕಥೆಯ ನೆಪದಲ್ಲಿ ರಾಜಪ್ರಭುತ್ವ, ರಾಜನ ಆಡಳಿತ, ರಾಜ ವಿಲಾಸಿ ಜೀವನ, ಯುವರಾಜ ಿದೇಶಕ್ಕೆ ಹೋಗಿ ಬರುವುದು ಆ ಕಾಲದಲ್ಲಿ ಮಂಚಕ್ಕೆ ಸಿಕ್ಕಿದ್ದ ಮಾನ್ಯತೆ ಅದಾದ ನಂತರ ಪ್ರಜಾಪ್ರಭುತ್ವದ ದುಕಿನ ಮಾದರಿಗಳೆರಡನ್ನು ದೇವನೂರರು ನಿರೂಪಿಸಲು ಇಚ್ಛಿಸಿದಂತೆ ತೋರುತ್ತದೆ.

ಮಂಚವು ಅರಮನೆಯಿಂದ ಹರಾಜಿಗೆ ಬಂದಾಗ ಅದನ್ನು ಯಾಡಕೊಂಡು ತಂದದ್ದು ಯಾಡನ
ಡಿಸಲು ಮುಂದೆ ತಂದಿಳಿಸಿದಾಗ ಮಳೆ ಗಾಳಿಗೆ ನೆನೆದು ಒಣಗಿದ್ದುಅಪ್ಪ ಸತ್ತ ಹನ್ನೆರಡು ತಿಂಗಳಿಗೆ
ಟ್ಟಿದ ಯಾಡ ಯಾಡೇಗೌಡನಾದದ್ದು. ನಿರ್ಗತಿಕ ಸ್ಥಿತಿಯಿಂದ ಶ್ರೀಮಂತನಾದದ್ದು ಈ ಶ್ರೀಮಂತಿಕೆಯನ್ನು
ಸಲು ಯಾಡ ಮತ್ತು ಯಾಡನ ತಾಯಿ ಅಕ್ಕಮಾದೇವಮ್ಮನವರು ಹಿಡಿದ ಅನ್ಯಾಯದ ಮಾರ್ಗಗಳ
ರಿತಾಗಿ ಮಂಚವು ಸೋಮಪ್ಪನ ಜೀವಾತ್ಮಕ್ಕೆ ಕಥೆಯನ್ನು ಹೇಳುತ್ತದೆ.

ಶ್ರೀಮಂತಿಕೆಯ ಹಿಂದಿರುವ ಅನಾಚಾರ ವಂಚನೆ ಮೋಸದ ಚಿತ್ರಣಗಳು ಅವು ಜನಸಾಮಾನ್ಯರ
ೀಲೆ ಉಂಟುಮಾಡುವ ದುಷ್ಪರಿಣಾಮಗಳು, ನಯವಂಚಕತನಗಳನ್ನು ನಿರೂಪಿಸಿವುದರಲ್ಲಿ ಮಂಚವು
ೀವಾತ್ಮಕ್ಕೆ ಹೇಳುವ ಕಥೆಯು ತಂತ್ರವಾಗಿ ಬಳಕೆಯಾಗಿರುವುದು ವಿಶಿಷ್ಟವಾಗಿದೆ.

ಯಾಡನಂತವರು ಶ್ರೀಮಂತರಾಗಲು ಉಪಯೋಗಿಸುವ ಬುದ್ದಿವಂತಿಕೆ ಸಾಮರ್ಥ್ಯ, ಚಾಲಾಕಿತನಗಳು,
ಯಾಡನಲ್ಲಿ ಮೂಡಿವೆ. ರಾಸುಗಳನ್ನು ಮಾರುವ, ಖೋಟಾ ನೋಟಿನವರಿಗೆ ಪಂಗನಾಮ ಹಾಕುವ
ಂದರ್ಭಗಳು ಶ್ರೀಮಂತರಾಗಲು ಯಾವ ಕೆಲಸ ಬೇಕಾದರೂ ಮಾಡುವರೆಂಬ ಸೂಚನೆಯನ್ನು ಮಂಚದ
ಥೆಯ ಮೂಲಕ ದೇವನೂರರು ಹೇಳುತ್ತಾರೆ.

ಮಂಚ ಮತ್ತು ಸೋಮಪ್ಪನ ಆತ್ಮ ಕಾಲಾತೀತವಾದದ್ದನ್ನು ಸಂಕೇತಿಸುತ್ತದೆ ಹಾಗೂ ಕಥೆಯ
ಂದರವನ್ನು ಬೆಳೆಸುವ ತಂತ್ರವೂ ಆಗಿದೆ. ಜ್ಯೋತಮ್ಮದೀರು ದಲಿತ ಪ್ರಪಂಚದ ದೀಪಗಳು ಎಂದು
ರ್ಥೈಸಬಹುದು ದಲಿತ ಸಂಘರ್ಷ ಸಮಿತಿಯ ಅರ್ಥಹೀನ ಹೋರಾಟವನ್ನು ಉದ್ದೇಶರಹಿತ ಹೋರಾಟ
ಲ ನಾಯಕರ ಎಡಬಿಡಂಗಿತನ, ದಲಿತರನ್ನು ಮುಂದಿಟ್ಟುಕೊಂಡು ನಾಯಕರಾಗಲು ಬಯಸುವ, ಮೇಲೇರಲು
ಯಸುವ, ಕೆಲವು ಕಲಿತ ದಲಿತರು ಇವೆಲ್ಲ ಕುರಿಯಯ್ಯನ ನನ್ನಿಯ ಪ್ರಸಂಗದಲ್ಲಿ ಕಾಣಬಹುದು.

ಜ್ಯೋತಮ್ಮ ಮೈದುಂಬಿದಾಗ ಕುರಿಯಯ್ಯ ಕಾಣುವ ತಲತಲಾಂತರದ ನನ್ನಿ ಮೇಲು ಕೆಳವರ್ಗಗಳ
ಂಡುಹೆಣ್ಣುಗಳು ಕೂಡುವ ನಿರಂತರ ಸತ್ಯದ್ದಾಗಿದೆ. ಕಾದಂಬರಿಯಲ್ಲಿ ಜಾತಿಯ ಪ್ರಶ್ನೆಯನ್ನು ಬದುಕಿನ
ರಂತರ ಸತ್ಯವಾದ ಗಂಡು ಹೆಣ್ಣಿನ, ಜಾತಿ ಜಾತಿಗಳ ಸಂಬಂಧಗಳ ಹಿನ್ನೆಲೆಯಲ್ಲಿ ಕೆದಕಿನೋಡುವ
ಯತ್ನವಿದೆ. ಜಾತಿ ವ್ಯವಸ್ಥೆಯನ್ನು ವರ್ತಮಾನದ ಅರಿವಿಗಿಂತ ಹೆಚ್ಚಾಗಿ ತಲತಲಾಂತರದ ನನ್ನಿಯಲ್ಲಿ
ೋಡಲಾಗಿದೆ. ಆ ಕಾರಣಕ್ಕಾಗಿ ಉತ್ತಮರು ಎನ್ನುವ ಕುರಿಯಯ್ಯನ ಮಾತನ್ನು ವಿನೋದದ ಶೈಲಿಯಲ್ಲಿ
ೋಡಿದ್ದರೂ ಚಾರಿತ್ರಿಕ ಸತ್ಯದ ಶೋಧನೆಗೆ ಅದು ಮುಖ ಮಾಡುತ್ತದೆ. ವರ್ಣ ಸಂಕರದ ಕಾರಣದಿಂದ
ಾತಿವ್ಯವಸ್ಥೆ ಎಂದೋ ನುಚ್ಚು ನೂರಾಗಿರುವ ವಾಸ್ತವತೆಯನ್ನು ಕೃತಿ ಧ್ವನಿಸುತ್ತದೆ.

ಹಾದರದ ಸಂಬಂಧಗಳನ್ನು ವರ್ಣಸಂಕರದ ಅತ್ಯಂತ ಸಹಜ ಚಾರಿತ್ರಿಕ ಪ್ರಕ್ರಿಯೆಯಾಗಿ
ಬಿತಿಸಬೇಕೆಂಬ ಆಶಯ ಲೇಖಕನಿಗಿದ್ದಂತೆ ಕಾಣುತ್ತದೆ. ಅಂತೆಯೇ ಕುರಿಯಯ್ಯನ ವಾದ ಮಂಡಿತವಾದದ್ದು.
ಯಯ್ಯನ ನನ್ನಿಯಲ್ಲಿ ಜಾತಿ ಸಮಸ್ಯೆ ಎಂಬುದು ಕೇವಲ ಮೇಲು ನೆಲೆಯಲ್ಲಿಯೇ ಸರಿದಾಡುತ್ತದೆ.
ತ್ತಮ ಜಾತಿ ಎಂಬ ಪಾವಿತ್ರ್ಯದ ಕಲ್ಪನೆಯನ್ನು ಬೀಳುಗೆಳೆಯುವುದೂ ಇತ್ತ. ದಲಿತ ಸಂಘರ್ಷ ಸಮಿತಿಯವರ
ಷ್ಟೆಯನ್ನು ಚಿಗುಟುಮುಳ್ಳಾಡಿಸಿ ತೆಗೆಯುವುದೂ ಒಟ್ಟಿಗೆ ನಡೆದಿದೆ.

ಕಾದಂಬರಿಕಾರರು ಜಾತಿ ಎಂದರೇನು ? ಎಂಬ ಮೂಲ ಪ್ರಶ್ನೆಯಿಂದ ವರ್ಣ ಸಂಕರ, ಚಳುವಳಿಗಳ
ಬೀಳುಗಳು, ಇವನ್ನು ಪ್ರಸ್ತುತದಲ್ಲಿ ಅರ್ಥೈಸುವುದು ಎಲ್ಲವನ್ನು ಕುರಿಯಯ್ಯನ ನನ್ನಿಯ ಸಂದರ್ಭವನ್ನು
ತ್ರವಾಗಿ ಬಳಿಸಕೊಳ್ಳಲಾಗಿದೆ. ದಲಿತ ಮೇಲ್ವರ್ಗದವರ ಸಂಬಂಧವನ್ನು ಹೇಳುವಲ್ಲಿ ಕಥೆಯ ಹಂದರವನ್ನು
ರ್ಣ, ವರ್ಗ ಸಂಘರ್ಷಗಳನ್ನು ಕಲಿತವರು ದಲಿತರ ನಡುವಿನ ವೈದೃಶ್ಯಗಳನ್ನು ದಲಿತರ ಬದುಕಿನ
ನಾ ಚಿತ್ರಣಗಳನ್ನು ಪೋಣಿಸಿ ಬಳಸಲಾಗಿದೆ.

ಗೋಡೆಗೆ ಸುಣ್ಣ ಬಳಿದಾಗ ರಕ್ತದ ಕಲೆಗಳು ಕಾಣೆಯಾಗಿ ಬಿಡುತ್ತವ ಎಂಬ ಮಾತನ್ನು ಒಂದು
ವ್ಯ ಕಲ್ಪನೆಯಾಗಿ ಕುಸುಮಬಾಲೆಯ ಉಪಸಂಹಾರದಲ್ಲಿ ಚಿತ್ರಿಸಿದ್ದಾರೆ. ಚನ್ನನು ಕೊಲೆಯಾಗಿರುವ
ಸಂಗವನ್ನು ಹೇಳುವಲ್ಲಿ ಜೋತಮ್ಮನನ್ನು ಬಳಸಿಕೊಂಡು ಯಾರೂ ಅರಿಯದ ಈ ಕಟು ಸತ್ಯವನ್ನು
ಕೆಯ ಮೂಲಕ ಹೇಳಿಸುವ ತಂತ್ರ ಇದಾಗಿದೆ. ತೂರಾರ ಹಟ್ಟಿಯ ಜೋತಮ್ಮ ತಾನೇ ಚನ್ನ –
ಸುಮರ ಪ್ರಣಯ ಪ್ರಸಂಗಗಳನ್ನು ಕಂಡಿದ್ದವಳು. ಅವಳು ಸೊಪ್ಪು ಸದೆ ತಂದು ಹೊಟ್ಟೆ ಹೊರೆಯುವ
ುದುಕಿ ಸಿಂಗಾರಮ್ಮನ ಹಟ್ಟಿಯ ಜೋತಮ್ಮ.

ಸಿಂಗಾರಮ್ಮ ಆ ಕಲೆಯ ಮೇಲೆ ತನ್ನ ಸೊಂಟದ ಡಬ್ಬಿಯಿಂದ ತೆಗೆದ ಸುಣ್ಣ ಬಳಿದಾಗ ಆ ರಕ್ತದ
ಟ್ಟು ಎಲ್ಲೆಲ್ಲೋ ಕಾಣತೊಡಗುತ್ತದೆ. ಗುರುತಿಲ್ಲದ ಪಟ್ಟಣದಲ್ಲೂ ಕಾಣುತ್ತದೆ. ದೇವೇಂದ್ರಾಯ್ನ ಪಟ್ಟಣಕ್ಕೆ
ಳಿತಂದರೆ ಅಲ್ಲೂ ಸಿಂಗಾರಮ್ಮ ಅದನ್ನು ಕಾಣುತ್ತಾಳೆ ಹೀಗೆ ಚನ್ನನ ಹತ್ಯೆಯ ಕಳಂಕ ಎಂದೂ ಅಳಿಸಲಾಗದ್ದು.

ಕಾದಂಬರಿಕಾರರು ಚನ್ನನ ಕೊಲೆಯನ್ನ ತೂರಾರ ಹಟ್ಟಿಯ ಜೋತಮ್ಮನ ಮೂಲಕ ಹೇಳುವ ತ್ರ ಬಳಸಿದ್ದಾರೆ.

ತೂರಮ್ಮನ ಪಾತ್ರಚಿತ್ರಣದಲ್ಲಿ ಹಲವು ತಂತ್ರಗಳು ಬಳಕೆಯಾಗಿದೆ. ತೂರಮ್ಮ ಚಿಂತೆಯನ್ನು ಟಿಸಿಕೊಂಡು ಕೂತಾಗ "ಇದ್ಯಾನ ಮುದ್ಕಿ ನಿನ್ನ ಕೆಲ್ಸ ಮುಗಿತ್ತಲ್ಲ ನನ್ನ ಬುಟ್ಟೀಯಾ?" ಎಂದು ಆ ದಿಯಮ್ಮನಿಂಗೆ ಸಿನೇತಗಾರಂಗಲ್ವ? ಅವಳ್ಯಾಕ್ ನಿಂಗ ಅನ್ಯಾಯ ಬಗದಾಳು ? ಎಂದು ಚಿಂತೆಯೇ ರಮ್ಮನನ್ನು ಕೇಳುವುದು ತೂರಮ್ಮ ತುಂಬಾ ಚಿಂತೆ ಮಾಡುತ್ತಿದ್ದಳೆಂದು ಹೇಳಲು ತೂರಮ್ಮನ ಜೊತೆಯಲ್ಲಿದ್ದು ಂತೆಗೆ ಬೇಸರವೆನಿಸಿ ಚಿಂತೆಯೇ ತೂರಮ್ಮನನ್ನು ಈ ರೀತಿ ಕೇಳುವುದು ಒಂದು ತಂತ್ರವಾಗಿ ನಿರೂಪಿತವಾಗಿದೆ. ಮೂರ್ತ ವಿಚಾರಗಳು ರೂಪಕಗಳಾಗಿ ಬರುವುದು ಇಲ್ಲಿನ ವಿಶಿಷ್ಟ ಶೈಲಿಯಾಗಿ ಬಳಕೆಯಾಗಿದೆ.

ತೂರಮ್ಮನ ವ್ಯಕ್ತಿತ್ವ ವೈವಿಧ್ಯಪೂರ್ಣವಾದುದು ಅವಳು ಹೊಣೆ ಅರಿತ ಸಂಸಾರಿ ತಾಯಿ ಅಪ್ಪಟ ಸಂಸ್ಕೃತಿಯ ಸಂವೇದನೆಗಳು ಈಕೆಯ ಮೂಲಕ ವ್ಯಕ್ತವಾಗಿವೆ. ಅಪ್ಪಟ ದೇಶೀತನ ಮತ್ತು ಪ್ರಾಮಾಣಿಕತೆ ವಳ ಜೀವನದಲ್ಲಿ ಹಾಸುಹೊಕ್ಕಾಗಿದೆ. ಮಾನವೀಯ ಸಂಬಂಧಗಳ, ಜೀವಪರವಾದ ಪ್ರೀತಿ, ಪ್ರಾಮಾಣಿಕತೆಗಳು ಸಿಯಾಗಿ ಕಾಣುವುದು ತೂರಮ್ಮನ ಮೂಲಕ. ಆ ಜೀವಪರವಾದ ಪ್ರೀತಿ ಕಾಣುವುದು ಈರಿಯ ಮಗುವನ್ನು ಳಿಸುವ ಪ್ರಯತ್ನದಲ್ಲಿ ಹಾಗೂ ತನ್ನ ಮಗಳು ಕೆಂಪಿಯ ಮಗುವನ್ನು ಉಳಿಸಿಕೊಳ್ಳುವ ಮೂಲಕ ನಾವರ್ಣಗೊಂಡಿವೆ. ಈರಿಯ ಕಂದನನ್ನು ಉಳಿಸಲು ತಾನು ಸೂಚಿಸುವ ಪೂಜೆ ನೇಮದ ರೀತಿನೀತಿಗಳು ದರ ಹಿಂದಿನ ನಂಬಿಕೆಗಳು ಏನೇ ಇದ್ದರೂ ಹಸಿದ ಹೊಟ್ಟೆಗೆ ಒಂದು ದಿನವಾದರೂ ಮೃಷ್ಟಾನ್ನ ೊರಕಿಸಿಕೊಡುವ ಸಂದರ್ಭವಿರಬೇಕು ಎಂಬ ಅನಿಸಿಕೆ ಬರುತ್ತದೆ.



ಹಾಗೆಯೇ ಕೆಂಪಿಯ ಮಗುವನ್ನು ಉಳಿಸಿಕೊಳ್ಳುವಲ್ಲಿ ತೂರಮ್ಮ ಮಾಡುವ ಮಂತ್ರ ವಿದ್ಯೆಗಳ ್ರಯೋಗ ವಿಶೇಷವಾಗಿ ಕಾಣುತ್ತದೆ. ಅವಳು ಮಾಡುವ ಮಂತ್ರ ವಿದ್ಯೆಗಳ ಪ್ರಯೋಗ ವಿಶೇಷವಾಗಿ ಾಣುತ್ತದೆ. ಅವಳು ಮಾಡುವ ಶಾಸ್ತ್ರಗಳ ಕಟ್ಟುಪಾಡುಗಳು ಕೆಂಪಿಯ ಹೆರಿಗೆಯ ಸಂದರ್ಭದಲ್ಲಿ ಅವಳು ಹಿಸುವ ಎಚ್ಚರ, ಎಲ್ಲರ ಹಿತದಲ್ಲಿ ಅವಳು ಆಸಕ್ತಿವಹಿಸಿ ಶ್ರಮ ತೆಗೆದುಕೊಳ್ಳುವ ಕಷ್ಟಜೀವಿ ಅವಳ ಳುವಳಿಕೆಯ ವ್ಯಾಪ್ತಿ ಹಾಗೂ ಅದರ ಹರಹು ಹೀಗೆ ಅದಕ್ಕೆ ಅದರದ್ದೇ ಒಂದು ತರ್ಕ, ಕಲ್ಪನೆಗಳೂ, ಾರ್ಯ ಕಾರಣ ಸಂಬಂಧ ಎಲ್ಲ ಇದೆ. ಅವಳು ಈ ಜಗತ್ತಿನಲ್ಲಿ ಉಪಯುಕ್ತಳು, ಮೆರೆಯಬಲ್ಲವಳು ೇವನೂರು ಇನ್ನೊಂದೆಡೆ ವರ್ಣಿಸುವಂತೆ ಅವಳು "ರಾತ್ರನಾಗ ಕಂದಮ್ಮಗಳ ಕಾಯ್ವ ಆ ತಾಯಿ ದೇವತೆಯಂತೆ" ಂದು ಹೇಳುವಲ್ಲಿ ಒಂದು ಮಾದರಿ ಪಾತ್ರವಾಗಿ ನಿರೂಪಿತವಾಗಿದೆ. ಈರಿಯ ಕಂದನನ್ನು ಉಳಿಸಲು ಾಡುವ ಪೂಜೆ ಮತ್ತು ಕೆಂಪಿಯ ಕಂದನನ್ನು ಉಳಿಸಿಕೊಳ್ಳಲು ಮಾಡುವ ಶಾಸ್ತ್ರಗಳು ಕಾದಂಬರಿಕಾರರು ಲ್ಲೋ ಕೇಳಿದ ಕಥೆಗಳಾಗಿದ್ದು ಅವುಗಳನ್ನು ನಿರೂಪಿಸುವಲ್ಲಿ ಕಥೆಯೊಳಗೆ ಇವುಗಳನ್ನು ಅಳವಡಿಸಿರುವ ೀತಿ ದೇವನೂರರ ಕಥಾ ನಿರೂಪಣಾ ತಂತ್ರಕ್ಕೆ ಸಾಕ್ಷಯಾಗಿದೆ.

# ಚೋಮನದುಡಿ

ಕಾದಂಬರಿಯಲ್ಲಿ ಚೋಮನ ಎಲ್ಲ ನೋವು ನಲಿವುಗಳನ್ನು ತನ್ನ ಮಗಳು ಬೆಳಿಗಿಂತಲೂ ಆತ್ಮೀಯವಾದ
ಿಯೊಂದಿಗೆ 'ದುಡಿ' ಚೋಮನ ಭಾವನೆಗಳನ್ನು ವ್ಯಕ್ತಪಡಿಸಲು ಬಳಸುವ ಮಾದ್ಯಮವಾಗಿ ಕಂಡಬರುತ್ತದೆ.
ಾಗಿ ಕಾದಂಬರಿಯಲ್ಲಿ ದುಡಿಗೆ ವಿಶಿಷ್ಟ ಸ್ಥಾನವಿದೆ. ಮೂಕನಂತಿದ್ದ ಚೋಮನ ಆತ್ಮಾವಿಷ್ಕಾರದ
ೀಕವಾಗಿದೆಯೆಂದು ಹೇಳಬಹುದು. ಅದೊಂದು ಒರಟು ವಾಧ್ಯ ಅದರ ಧ್ವನಿ ಎಲ್ಲೆಡೆಯಲ್ಲಿ ತುಂಬಿಕೊಂಡು
ರ್ದನಿಗೊಂಡು ಕೇಳುವವರನ್ನು ಬೆಚ್ಚಿ ಬೀಳಿಸುತ್ತದೆ. ಎಲ್ಲರ ಗಮನವನ್ನು ಸೆಳೆದುಕೊಳ್ಳಬಲ್ಲ ಆದಿವಾಸಿಗಳ
ಯ ಆವಿಷ್ಕಾರ ಅದಕ್ಕಿದೆ. ಅಂತೆಯೇ ಭಗ್ನ ಹೃದಯಿಯಾದ ಚೋಮ ಅದರ ಮೂಲಕ ತನ್ನನ್ನು
ವ್ಯಕ್ತಗೊಳಿಸಲು ಒಂದೇ ಸಮನೇ ಹವಣಿಸಿರುತ್ತಾನೆ. ಚೋಮನಿಗೆ ಬಂದ ಸಂಕಟಗಳು ಹಾಗೂ ಆತನ
ಡಿಯ ನುಡಿಗಳಲ್ಲಿ ತೀರ ಹತ್ತಿರದ ನಂಟನ್ನು ಕಾಣಬಹುದು.

ದಿನದ ಕೆಲಸವೆಲ್ಲ ಮುಗಿದು ತನ್ನ ಆಯಾಸವನ್ನು ಪರಿಹರಿಸಿಕೊಳ್ಳಲು ತನ್ನ ಮಕ್ಕಳೊಂದಿಗೆ
ಡಿಯನ್ನು ನುಡಿಸುತ್ತಾ ಮನರಂಜನೆಗಾಗಿ ಚೋಮದುಡಿಯನ್ನು ನುಡಿಸುತ್ತಾನೆ ಮೊದಲ ಭಾರಿಗೆ ಮನ್ವೇಲ
ೆ ಮನೆಯ ಬಾಗಿಲಿಗೆ ಬಂದಾಗ ಚೋಮ ದುಡಿಯನ್ನು ನುಡಿಸುತ್ತಿರುತ್ತಾನೆ. ಗುರುವ ಜಾತಿಕೆಟ್ಟಾಗ
ಯನು ಸತ್ತಾಗಲೂ ಸಹ ಚೋಮ ತಟ್ಟನೆ ಎದ್ದು ತನ್ನ ದುಡಿಯನ್ನು ನುಡಿಸುತ್ತಾನೆ. ಮತ್ತೊಬ್ಬ ಮಗ
ಲ ನೀರಿನಲ್ಲಿ ಬಿದ್ದು ಸತ್ತಾಗ ಪೋಲಿಸರಿಂದ ಪಂಚಮನಾಮೆಯಾಗಿ ರಾತ್ರಿ ಹೆಣಕ್ಕೆ ಮಣ್ಣು ಕೊಟ್ಟಾಗ
ಿಕ ಇನ್ನೂ ನಸುಕು ಹರಿಯುವ ಮುನ್ನವೇ ದುಡಿಯನ್ನು ಭಾರಿಸಿ ಇಡೀ ಹಳ್ಳಿ ಬಡಬಡನೆ ಎಚ್ಚರಗೊಳ್ಳುವಂತೆ
ಾಡುತ್ತಾನೆ. ಆಗ ಪ್ರಳಯವೇ ಆದಂತೆ ಬಾಸವಾಗುತ್ತದೆ. ತನ್ನ ಸಾವಿಗೆ ತುಸು ಮೊದಲು ಸಹ ದುಡಿಯನ್ನು
ಡಿಸುತ್ತಾನೆ. ಅವನು ಸತ್ತಾಗಲೂ ಒಂದು ಕೈಯಲ್ಲಿ ದುಡಿ ಇದ್ದರೆ ಮತ್ತೊಂದು ಕೈ ಅದನ್ನು ನುಡಿಸಲು
ೇಲೆ ಎತ್ತಿದ್ದು ಹಾಗೆಯೇ ಇತ್ತು.

ಚೋಮ ದುಡಿಯನ್ನು ನುಡಿಸುವುದು ಮೊದಲ ಬಾರಿಗೆ ಕೇಳಿದವರಿಗೆ ಭಯವನ್ನುಂಟುಮಾಡುವುದು,
ೋಮನ ದಣಿಗಳಾದ ಸಂಕಪ್ಪಯ್ಯನವರಿಗೆ ಚೋಮ ನುಡಿಸುವ ದುಡಿಯನ್ನು ಅರ್ಥೈಯಿಸಿಕೊಳ್ಳುವ
ತಿಯೇ ಬೇರೆಯಾಗಿರುತ್ತದೆ. ಚೋಮನಿಗೆ ಹೆಂಡ ಹೆಚ್ಚಾದಾಗ ದುಡಿಯನ್ನು ನುಡಿಸುತ್ತಾನಷ್ಟೆ ಎಂಬುದಾಗಿ
ಿಯುತ್ತಾರೆ. ಇನ್ನು ಅವನ ಮಕ್ಕಳು ತನ್ನ ಬೇಸರವನ್ನು ಕಳೆದುಕೊಳ್ಳಲು ಮನರಂಜನೆಗಾಗಿ ನುಡಿಸುತ್ತಾನೆ
ನ್ನುವ ಅಭಿಪ್ರಾಯವುಳ್ಳವರಾಗಿರುತ್ತಾರೆ.

ಚೋಮನ ಜೀವನದಲ್ಲಿ ತನ್ನ ಹೆಂಡತಿ ಸಾಯುವ ದಿನ ದುಖದಿಂದ ಹಿಡಿದು ಬೆಳ್ಳಿ ಮತ್ತು ಮನ್ವೇಲರನ್ನು ಹುಡಿಸಲಲ್ಲಿ ಒಟ್ಟಿಗೆ ಕಂಡಾಗ ಆಗುವ ದಿಗ್ಭ್ರಮೆಯವರೆಗೆ ಪೂರ್ತಿಯಾಗಿ ಸುಖ – ದುಖಃ ಎರಡೂ ಘಟನೆಗಳಲ್ಲೂ ಅವನ ಭಾವನೆಗಳನ್ನೇ ಆತ್ಮೀಯವಾಗಿ ಹಂಚಿಕೊಳ್ಳುವುದು ದುಡಿಯ ಜೊತೆಗೆ. ನಿರ್ಜಿವವಾದ ದುಡಿಯೊಟ್ಟಿಗಿನ ಜೀವಂತ ಸಂಬಂಧ ಚೋಮನದು. ತನ್ನ ಸಂತೋಷ, ದುಖಃ, ದ್ವೇಷ, ಪ್ರತೀಕಾರ, ಅಸಹಾಯಕತೆ, ನಂಬಿಕೆ ಎಲ್ಲ ಭಾವನೆಗಳನ್ನು ಚೋಮ ಹಂಚಿಕೊಳ್ಳುವುದು ತನ್ನ ದುಡಿಯೊಟ್ಟಿಗೆ.

ಕೇಳುವವರಿಗೆ ದುಡಿಯ ಸದ್ದು ಯಾವಾಗಲು ಒಂದೇ ರೀತಿ ಕೇಳಿಸುತ್ತದೆ. ಚೋಮನ ಬದುಕನ್ನು ಹೊರಗಿನಿಂದ ನಿಂತು ನೋಡುವವರಿಗೆ ಆಸದ್ದು ಒಂದೇ ರೀತಿ ಆದರೆ ಚೋಮನಿಗೆ ತನ್ನ ಭಾವನೆಗಳಿಗೆ ತಕ್ಕಂತೆ ಕೆಲವೊಮ್ಮೆ ಸೌಮ್ಯ ಸುಂದರವೆನಿಸುತ್ತದೆ. ಕೆಲವೊಮ್ಮೆ ರೌದ್ರವಾಗಿರುತ್ತದೆ. * ಕಾದಂಬರಿಯಲ್ಲಿ ದುಡಿಯ ನುಡಿತ ಪ್ರತೀಕಾತ್ಮಕತೆಯ ಪಾತಳಿಯನ್ನು ತಲುಪಿದೆ ಹಾಗೂ ತಂತ್ರವಾಗಿ ಬಳಕೆಯಾಗಿದೆ.

ಪರಂಪರಾಗತ ಸಾಮಾಜಿಕ ವ್ಯವಸ್ಥೆಯೊಂದ ಆಧುನಿಕ ಮೌಲ್ಯಗಳಿಗೆ ಮುಖಾಮುಖಿಯಾದಾಗ ಪಲ್ಲಟಗೊಳ್ಳುವ ಕ್ರಮವನ್ನು ಮತ್ತು ಭಾರತೀಯ ಜಾತಿ ವ್ಯವಸ್ಥೆಯ ಸಂದರ್ಭದಲ್ಲಿ ಪರಂಪರಾಗತ ಮೌಲ್ಯಗಳಿಗೆ ಮಾತ್ರ ಮುಖಾ ಮುಖಿಯಾಗಿದೆ. ವಸಾಹತುಶಾಹಿ ಮೌಲ್ಯಗಳಿಗೂ ಒಂದೇ ಮಟ್ಟದಲ್ಲಿ ಮುಖಾ ಮುಖಿಯಾಗಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ಅಂದರೆ ಭಾರತೀಯ ಜಾತಿ ವ್ಯವಸ್ಥೆಯು ವಸತುಶಾಹಿ ಆಧುನಿಕತೆಯ ಮೌಲ್ಯಗಳನ್ನೆ ಜೀರ್ಣಿಸಿಕೊಳ್ಳುತ್ತಲೇ ಇತರ ಸಮುದಾಯಗಳನ್ನು ಈ ಸಂದರ್ಭದಿಂದ ಹೊರಗಿಟ್ಟ ಪ್ರಕ್ರಿಯೆಗಳಿಗೆ ಈ ಕಾದಂಬರಿ ಮುಖಾಮುಖಿಯಾಗಿದೆ.

ಈ ನಾಡಿನ ದಲಿತ ಸಮುದಾಯಗಳ ನಿಜವಾದ ಸಮಸ್ಯೆ ಶೋಷಣೆಯ ಸಮಸ್ಯೆ ಎಂಬುದನ್ನು ಕಾರಂತರು ಭಾವನೆಗಳ ಅಬ್ಬರವಿಲ್ಲದೆ ಗ್ರಹಿಸಿದ್ದಾರೆ ಹಾಗೆಯೇ ಪರಂಪರಗತವಾದ ಹಿಂದೂ ಸಂಸ್ಕೃತಿ ಜೊತೆಗೆ ಆಧುನಿಕತೆಯ ವಸಹತು ವ್ಯವಸ್ಥೆಗೂ ದಲಿತರೂ ಹೊಂದಿಕೊಳ್ಳಲು ದಲಿತರು ಪರದಾಡುವುದುನ್ನು ಕಾರಂತರು ಕಾದಂಬರಿಯಲ್ಲಿ ತೋರಿಸಿದ್ದಾರೆ. ಹಿಂದೂ ಸಮಾಜ ಚೋಮನಂತಹ ಎಷ್ಟೋ ಕೆಳವರ್ಗದವರ ಸಹಜ ಅಭೀಪ್ಸೆಯೊಂದನ್ನು ಈಡೇರಿಸುವಷ್ಟು ಬದಲಾಗಿಲ್ಲ. ಎಲ್ಲಿಯವರೆಗೂ ಹಿಂದೂ ಸಂಸ್ಕೃತಿ ನಿಶ್ಚಲವಾಗಿರುವುದೋ ಅಲ್ಲಿಯವರೆಗೆ ಯತಾಸ್ಥಿತಿ ಮುಂದುವರಿಯುತ್ತದೆ.

ಇದು ಶತಮಾನಗಳ ವಾಸ್ತವ. ಚೋಮನ ಕಾಲಘಟ್ಟದಿಂದ ಹಿಡಿದು ಇಂದಿನವರೆಗೆ ನೋಡಿದರೂ ಲಿತರ ಬದುಕಿನಲ್ಲಿ ಅಂತಹ ಬದಲಾವಣೆಗಳೇನು ಕಂಡುಬಂದಿಲ್ಲ. ಇಲ್ಲಿನ ಜಾತಿ ವ್ಯವಸ್ಥೆಯ ಆಳವಾದ ರುಗಳು ವ್ಯವಸ್ಥೆಯನ್ನು ಯತಾವತ್ತಾಗಿ ಕಾಪಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಕಾದಂಬರಿಯಲ್ಲಿ ೋಮ ಮತಾಂತರವಾಗಿಯಾದರೂ ತನ್ನ ಆಸೆಯನ್ನು ಈಡೇರಿಸಿಕೊಳ್ಳಲು ನಿರ್ಧರಿಸಿದಾಗ ಪಂಜುರ್ಲಿ ಂತ ಮಾತನಾಡುವಂತೆ ಕಲ್ಪಿಸಿಕೊಳ್ಳುವ ಚೋಮನ ಅಲೋಚನೆಗಳು ತಂತ್ರವಾಗಿ ಬಳಕೆಯಾಗಿದೆ. ೋಮನ ಅಚಲವಾದ ನಿರ್ಧಾರ ಅಲ್ಲಿ ಒಡೆಯುತ್ತದೆ. ಅಂದರೆ ಒಂದು ವ್ಯವಸ್ಥೆಯಿಂದ ತಾನು ಏನೇ ವಮಾನ, ನೋವು, ನಿರಾಸೆಯನ್ನು ಅನುಭವಿಸಿದರೂ ಅಲ್ಲಿಯೇ ಇರಬೇಕು. ಅದನ್ನೇ ಶ್ರೇಷ್ಠ ಎನ್ನಬೇಕು ನ್ನುವ ಅಭಿಪ್ರಾಯವನ್ನೆ ಆ ಸಂದರ್ಭ ಹೇಳುತ್ತದೆ.

ಚೋಮನ ಸಮಸ್ಯೆ ಅವನ ವರ್ಗದ ಸಮಸ್ಯೆಯೂ ಹೌದು, ವರ್ಣದ ಸಮಸ್ಯೆಯೂ ಹೌದು. ವನ ಸಮಸ್ಯೆಯ ಮೂಲ ಅವನು ಅನುಭವಿಸುವ ವರ್ಗ, ವರ್ಣಗಳ ಅಸಮಾನತೆಯ ಗರ್ಭದಲ್ಲಿಯೇ ದೆ. ಹಿಂದೂ ಸಂಸ್ಕೃತಿಯ ಚೌಕಟ್ಟಿನಲ್ಲಿಯೇ ದಲಿತರ ಸಮಸ್ಯೆಗಳು ಬಗೆಹರಿಯುವಷ್ಟು ಸಮಾಜ ಬೆಳೆದಿಲ್ಲ. ೋಮನಿಗೆ ಗೇಣಿಗೆ ಭೂಮಿ ಕೊಡಲು ಒಪ್ಪುವ ಸಂಕಪ್ಪಯ್ಯನವರ ಮನಸ್ಸು ಜಾತಿ ಪದ್ಧತಿಯನ್ನು ರ್ಮವನ್ನು ಉಸಿರಾಗಿಸಿಕೊಂಡು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಿರುವ ಅವನ ತಾಯಿಯ ಮಾತುಗಳನ್ನು ೀರುವಲ್ಲಿ ಯಶಸ್ವಿಯಾಗುವುದಿಲ್ಲ. ದಲಿತರ ಸಮಸ್ಯೆಯನ್ನು ಕಂಡು ಹುಸಿ ಕನಿಕರವನ್ನು ತೋರಿಸುವ ಂಕಪ್ಪಯ್ಯನಂತಹ ಮನಸ್ಸುಗಳು ಚೋಮನಿಗೆ ಭೂಮಿಕೊಡುವಂತಹ ಮನಸ್ಸು ಮಾಡುವುದೇ ಇಲ್ಲ.

ದಲಿತರು ಸ್ವತಂತ್ರರಾದರೆ ಮೇಲ್ವರ್ಗಗಳಿಗೆ ಅದೊಂದು ಅವಮಾನ ಮತ್ತು ತಮ್ಮ ಜೀತಕ್ಕೆ ಕುತ್ತು ರುತ್ತದೆ ಎಂಬ ಧ್ವನಿಗಳೂ ಸಹ ಕಾದಂಬರಿಯಲ್ಲಿ ವ್ಯಕ್ತವಾಗುತ್ತವೆ. ಈ ಕಾರಣಕ್ಕಾಗಿಯೇ ಚೋಮನ ೀವನದಲ್ಲಿ ತಾನು ಬೇಸಾಯಗಾರನಾಗುವ ಕನಸು ಕನಸಾಗಿಯೇ ಉಳಿಯುತ್ತದೆ. ಇಲ್ಲಿ ಜಾತಿ ಎಂಬುದು ಮುಖ ಪಾತ್ರವಹಿಸುತ್ತದೆ. ಹಾಗೂ ಕೆಳವರ್ಗದವರ ಅಸಹಾಯಕತೆ ಮತ್ತು ಮೇಲ್ವರ್ಗದ ಮೇಲಿನ ವಲಂಬನೆಯನ್ನು ಚೋಮ ಮತ್ತು ಅವನ ಕುಟುಂಬದ ಮೂಲಕ ಅನಾರವಣಗೊಳಿಸಲಾಗಿದೆ.

ಚೋಮ ಜಾತಿ ಮತ್ತು ಧರ್ಮಗಳ ಎರಡೂ ಇಕ್ಕಟ್ಟಿನಲ್ಲಿ ನವೋದಯ ಕಾಲದ ಸೂಕ್ಷ್ಮ ಒತ್ತಡದಲ್ಲಿ ಲುಗಿ ಹೋಗುವ ಸ್ಥಿತಿಯನ್ನು ಕಾರಂತರು ಪುನರ್‌ಸೃಷ್ಟಿಸುವ ರೀತಿಯು ಕಲಾತ್ಮಕ ಸಿದ್ದಿಯಲ್ಲಿ ಗೆದ್ದುಬಿಟ್ಟರೂ ಪಾತ್ರದ ಬೆನ್ನಹಿಂದೆ ಗಾಡ ಕತ್ತಲಲ್ಲಿ ಮುಳುಗಿರುವ ಅಗಾಧ ಲೋಕ ಮಾತ್ರ ಹಂಗೇ ಬಿದ್ದಿರುತ್ತದೆ. ಈ ರುದ್ಯವನ್ನು ಮೀರಲಾರದೆ ಕಾರಂತರ ಚೋಮ ಮರಳಿ ತನ್ನ ತಲೆಯ ಮೇಲೆ ಪಾದವಿಟ್ಟು ತುಳಿಯುವ ನ್ನನ್ನು ಹಿಂಸಿಸಿ ಅವಮಾನಿಸುವ ತನಗೆ ಯಾವ ಸ್ವತಂತ್ರವನ್ನ ನೀಡದ ಜಾತಿ ಮತ್ತು ಧರ್ಮದ ಅವತಾರಗಳಿಗೇ ಂದಿರುಗುತ್ತಾನೆ.

ಜಾತಿ ವ್ಯವಸ್ಥೆಯ ಈ ಸಮಾಜದ ಕರಾಳ ಮುಖವನ್ನು ಪರಿಚಯಿಸುವಲ್ಲಿ ಕಾರಂತರು ಅನೇಕ ಘಟನೆಗಳ
ಕ ಆ ಘಟನೆಗಳು ತಂತ್ರಗಳಾಗಿ ಬಳಕೆಯಾಗಿದೆ. ನೀಲನ ಸಾವಿನ ನಿರೂಪಣೆಯಲ್ಲಿ ಜಾತಿಯ ಕರಾಳ
ವನ್ನು ಕಾಣಬಹುದು. ನೀಲ ನೀರಿನಲ್ಲಿ ಕಾಲುಜಾರಿ ಬಿದ್ದು ಮುಳುಗಿ ಸಾಯುತ್ತಿರುವ ಸಂದರ್ಭದಲ್ಲಿ
ರುವ ಮೇಲ್ಜಾತಿ ಜನರಿಗೆ ಮಾನವ ಸಹಜವಾದ ಪ್ರೀತಿ, ಮಾನವೀಯತೆಗಳು ಮರೆತುಹೋಗುತ್ತವೆ. ಅಲ್ಲಿ
ಜಿಸುವುದು ಮೇಲ್ಜಾತಿ ಎಂಬ ಜಾತಿಯ ಹಮ್ಮು ಮಾತ್ರ.

ಭಾಗಶಃ ವಾಸ್ತವವಾದಿ ಕಾದಂಬರಿಗಳೆಲ್ಲವೂ ಯತಾಸ್ಥಿತಿಯ ಮತಿಯಲ್ಲೇ ತಮ್ಮ ಅನನ್ಯತೆಯನ್ನು ಹುಡುಕಲು
ಗುವುದರಿಂದ ಒಂದೊಂದು ಜಾತಿ, ವರ್ಗ, ವರ್ಣ, ಲಿಂಗ ಸಂಬಂಧಗಳ ಚೌಕಟ್ಟನ್ನು ಮೀರಿ ಅನುಭವ
ವ ಮೂರ್ತ ಸ್ವರೂಪವನ್ನು ಭಗ್ನಗೊಳಿಸಲಾರದೆ ತಟಸ್ಥವಾಗುತ್ತವೆ. ಗತಿಶೀಲತೆಯನ್ನು ಸೃಜನಶೀಲ ಸಂವೇದನೆ
ಗೆ ಸಂಯೋಗ ಮಾಡುವಾಗಲೂ ಎಲ್ಲ ಲೇಖಕರಿಗೂ ಸಮಸ್ಯಗಳಿವೆ. ಹೀಗಾಗಿ ಕಾರಂತರೂ ಕೂಡ ಇಂತಹ
ರ್ಣ ಅವಸ್ಥಾಂತರಗಳಲ್ಲಿ ಕಾರಂತರು ಚೋಮನನ್ನು ಸೃಷ್ಟಿಸಿದ್ದಾರೆ.

ಚೋಮನ ಜೀವನದಲ್ಲಿನ ಎಲ್ಲಾ ಆಗುಹೋಗುಗಳನ್ನು ಜೀವನದ ಮೇಲಿನ ಪ್ರೀತಿಯಿಂದ ಹೊರಹೊಮ್ಮುವ
ರಣೆ ಮತ್ತು ಸಾಮಾಜಿಕವಾಗಿ ಶೋಷಣೆಗೆ ಒಳಗಾಗಿರುವ ಪರಿಸ್ಥಿತಿ ಇವುಗಳ ಸಂಘರ್ಷವೆನ್ನಬಹುದು. ಈ
ರ್ಷಗಳಿಗೆ ಪ್ರೀತಿ ವಾತ್ಸಲ್ಯಗಳಿಗೆ ಆಯಾಮವಿದೆ. ಅನಕ್ಷರತೆಯಿಂದ ಉಂಟಾದ ನಿಸ್ಸಾಹಯಕ ಸ್ಥಿತಿಯ ದುರಂತದ
ವಿದೆ ಮತ್ತು ಸಾಮಾಜಿಕ ನ್ಯಾಯವೇ ಸಾಧ್ಯವಾಗದ ಶೋಷಣೆಯ ಸ್ಪರ್ಶವಿದೆ.

ಆದರ್ಶದ ಬೆನ್ನು ಹತ್ತಿ ರೊಮ್ಯಾಂಟಿಕ್ ಆಗಲು ನಿರಾಕರಿಸಿದವರು ಕಾರಂತರು. ಅವರ ನಿರೂಪಣಾ
ನದಲ್ಲಿ ಈ ಅಂಶ ಹಾಸುಹೊಕ್ಕಾಗಿದೆ. ಹೀಗಾಗಿ ವಾಸ್ತವದ ನಿರೂಪಣೆಯಲ್ಲಿ ಇರುವ ಸ್ಥಿತಿಯನ್ನು ಸಾಹಿತ್ಯಿಕ
ದಿಂದ ಎಷ್ಟರ ಮಟ್ಟಿಗೆ ಚೋಮನದುಡಿ ಕಾದಂಬರಿ ಓದುಗರ ಮನಮುಟ್ಟುತ್ತದೆ ಎಂಬ ಪ್ರಶ್ನೆಗೆ ಈ ಪ್ರಕ್ರಿಯೆಯಲ್ಲಿ
ಂಬರಿ ಬಹುಮಟ್ಟಿಗೆ ಯಶಸ್ವಿಯಾಗಿದೆ.

ವ್ಯವಸ್ಥೆಯ ಚಿತ್ರಣ ಒಂದು ಕಡೆಗಿದ್ದರೆ, ಚೋಮನ ಸಾಂಸಾರಿಕ ಚಿತ್ರ ಇನ್ನೊಂದೆಡೆಗಿದೆ. ಈ ಕಾದಂಬರಿಯಲ್ಲಿ
ಂಬ ಮತ್ತು ಸಮಾಜದ ಎರಡೂ ಚಿತ್ರಣಗಳನ್ನು ನೋಡುತ್ತಲೇ ಕಾರಂತರು ಒಂದು ಸೂಕ್ಷ್ಮ ವಿಷಯವನ್ನು
ೀಮನ ದುಡಿ"ಯಲ್ಲಿ ಧ್ವನಿಸುತ್ತಾರೆ. ವ್ಯವಸ್ಥೆಯು ಅನಾರೋಗ್ಯವಾಗಿದ್ದರೆ, ಆರೋಗ್ಯಕರವಾದ ಕುಟುಂಬ ಮೌಲ್ಯಗಳು
ಬಲಿಯಾಗುತ್ತವೆ ಎಂಬುದನ್ನು ಈ ಕಾದಂಬರಿಯು ಪ್ರಖರವಾಗಿ ಬಿಂಬಿಸುತ್ತದೆ.

ಬಡತನದಲ್ಲೂ ಸುಖಿಯಾಗಿರುವ ಚೋಮನ ಕುಟುಂಬ ಇದಕ್ಕೆ ವಿರುದ್ಧವಾಗಿ ಮೂಡಿಬರುವ ವ್ಯವಸ್ಥೆಯ
ಾದಲ್ಲಿ ಅನಿವಾರ್ಯತೆಯ ಅಂಶಗಳೇ ಹೆಚ್ಚಾಗಿವೆ. ಈ ಅನಿವಾರ್ಯತೆಯಿಂದ ಮನನೊಂದವನು ಚೋಮ.
ವಾರ್ಯತೆಯ ಅರಿವಿರುವುದು ಬೇರೆ, ಅನಿವಾರ್ಯತೆಯನ್ನು ಅನುಭವಿಸಿ ಬದುಕುವುದು ಬೇರೆ. ಚೋಮ
ವಾರ್ಯತೆಯಿಂದ ಮನನೊಂದು ಬದುಕಿರುವವ. ಅವನ ಒಡೆಯರು ಮತ್ತು ಇತರರು ಅನಿವಾರ್ಯತೆಯ
ವಿನಿಂದ ಬದುಕುತ್ತಿರುವವರು ಲೇಖಕರೂ ಕೂಡ.

ಚೋಮ ನುಡಿಸುವ ದುಡಿಗೆ ಯಾವುದೇ ನಾದಮಾದುರ್ಯವಿಲ್ಲ. ಇದು ಆತನ ಜೀವನದಂತೆ
ಂತ್ರಿಕವಾಗಿದೆ ಮಾದುರ್ಯವಿಲ್ಲದ ನಾದವನ್ನು ಹೊರಡಿಸುತ್ತದೆ. ಆದರೆ ಅದೊಂದೇ ಆತನ ದುಃಖವನ್ನು
ಯಿಸಬಲ್ಲ ಸಾಧನ. ಇದರೊಂದಿಗೆ ಆತನ ಕುಡಿತನದ ಚಟವೂ ಸೇರಿಕೊಂಡಿದೆ. ಇವುಗಳ ಸಂಗಮದಿಂದಾಗಿಯೇ
ೀಮ ಎಲ್ಲ ಅನಿವಾರ್ಯತೆಗಳನ್ನು ಸಹಿಸಿಕೊಂಡಿದ್ದಾನೆ. ಈ ವಿಷಯದಲ್ಲಿ ಕಾದಂಬರಿ ಅಪೂರ್ವವಾದ
ತೆಯನ್ನು ಮತ್ತು ಗಮನಾರ್ಹವಾದ ಸೂಚ್ಯ ಶಕ್ತಿಯನ್ನು ಸಾಧಿಸಿದೆ.

ಕನ್ನಡ ಕಾದಂಬರಿ ಲೋಕದಲ್ಲಿ ಚೋಮನ ದುಡಿಗೆ ಒಂದು ವಿಶಿಷ್ಟವಾದ ಸ್ಥಾನವಿರುವುದು. ಅದು
ಿತ ಜೀವನವನ್ನೇ ಬಿಂಬಿಸುತ್ತದೆಂಬ ಒಂದೇ ಕಾರಣಕ್ಕಾಗಿ ಅಲ್ಲ. ಅದು ಒಂದು ದುರಂತವನ್ನು ಬಹುತಾಳ್ಮೆಯಿಂದ
ಾವುದೇ ಪಕ್ಷವನ್ನು ವಹಿಸಿಕೊಳ್ಳದೆ ಬಿಂಬಿಸುತ್ತದೆ.

## ಕೊನೆ ಟಿಪ್ಪಣಿ :

ಸಾಹಿತ್ಯ ಸಂದರ್ಭ – ಟಿ.ಪಿ. ಅಶೋಕ ಪ್ರಕಾಶನ

– ಅಕ್ಷರ ಪ್ರಕಾಶನ, ಹೆಗ್ಗೋಡು (ವಿಮರ್ಶಾತ್ಮಕ ಲೇಖನಗಳ ಸಂಕಲನ)

ಸಾಗರ ಕರ್ನಾಟಕ –1991 ಪುಟ – 72

ದೇವನೂರು ಮಹದೇವರ ಕಥೆಗಳು ಮತ್ತು ಕಾದಂಬರಿಗಳು

– ಉದಯಕುಮಾರ್ ಹುಬ್ಬು ,

ಮಾನಸ ಬುಕ್‌ಹೌಸ್, ಮೈಸೂರು–2012 ಪುಟ – 99

ಕುಸುಮಬಾಲೆ – ದೇವನೂರು ಮಹದೇವ

– ಅಭಿನವ ಪ್ರಕಾಶನ, ಬೆಂ.–2008 ಪುಟ – 06

ನವಕರ್ನಾಟಕ ಸಂಪಾದನೆ ದೇವನೂರ ಮಹಾದೇವ

– ಎನ್.ಪಿ.ಶಂಕರನಾರಾಯಣ ಪುಟ – 83

ಯಾರ ಜಪ್ತಿಗೂ ಸಿಗದ ನವಿಲುಗಳು – ಸಂಪಾದಕರು ಪಿ. ಚಂದ್ರಿಕ

– ಅಭಿನವ ಪ್ರಕಾಶನ – 2000 ಪುಟ – 94

ಕಾರಂತರ ಚಿಂತನ, ಕಾಡಲಾಚೆಯ ಕನ್ನಡಿಗರಿಗೆ – ನಾಗಐತಾಳ

(ಆಹಿತನೂ) ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ–2000 ಪುಟ – 130

ಶಿವರಾಮ ಕಾರಂತರ ಎರಡು ಅಧ್ಯಾಯನಗಳು – ಟಿ.ಪಿ. ಅಶೋಕ

– ಅಕ್ಷರ ಪ್ರಕಾಶನ – 1992 ಪುಟ – 88

ಅದೇ ------------"---------- ಪುಟ –89

# ಉಪಸಂಹಾರ

ಒಟ್ಟಾರೆ ಅಧ್ಯಯನ ಗ್ರಹಿಕೆಗಳನ್ನು ಈ ಕೆಳಕಂಡಂತೆ ಗ್ರಹಿಸಬಹುದು.

ಪ್ರಾರಂಭದಲ್ಲಿ ವರ್ಣಗಳ ಕ್ರಮೇಣ ಜಾತಿಗಳಾಗಿ ರೂಪಿತಗೊಂದು ಕಾಲಕ್ರಮೇಣ ವರ್ಗಗಳಾಗಿ ಜಾತಿಗಳಾಗಿ ವನ್ನು ವಿಭಜಿಸಿ ಕ್ರಮೇಣ ಮೇಲುಕೀಳಿನ ತಾರತಮ್ಯವನ್ನು ಸೃಷ್ಟಿಸಿದ ಈ ಜಾತಿಯ ಸ್ವರೂಪವ ಆದಿಯಿಂದ ನವರೆಗೂ ವಿವಿಧ ರೂಪಗಳನ್ನು ತಾಳಿ ಜನಮಾನಸದಿಂದ ಸಾಹಿತ್ಯ ಅಭಿವ್ಯಕ್ತಿಯಾಗಿ ಹೊರಹೊಮ್ಮಿರುವುದನ್ನು ಾಯ ಸಂದರ್ಭದಲ್ಲಿನ ಸಾಹಿತ್ಯದಲ್ಲಿ ಪಡೆನುಡಿದಿರುವುದನ್ನು ಎರಡು ವಿಭಿನ್ನ ವ್ಯಕ್ತಿತ್ವಗಳ ವಿಭಿನ್ನ ಸ್ಥರಗಳಲ್ಲಿ ಯಾಗಿರುವ ಕ್ರಮವನ್ನು ಚೋಮನದುಡಿ, ಮತ್ತು ಕುಸುಮಬಾಲೆ ಕಾದಂಬರಿಗಳಲ್ಲಿನ ದಲಿತ ಸಂವೇದನೆಯ ಪ ಎಂಬ ವಿಷಯವನ್ನೇ ನನ್ನ ಎಂ.ಫಿಲ್. ಪದವಿಗೆ ಆಯ್ಕೆ ಮಾಡಿಕೊಂಡು ಅಧ್ಯಯನ ಕೈಗೊಂಡು ಒಟ್ಟಾರೆ ಪಲಿತಗಳನ್ನು ಈ ಕೆಳಕಂಡಂತೆ ಗ್ರಹಿಸಿದ್ದೇನೆ. ವಿಷಯದ ಆಯ್ಕೆಯ ದೃಷ್ಟಿಯಿಂದ ಮೊದಲಿಗೆ ಶ ವ್ಯಾಪ್ತಿಯನ್ನು ಮತ್ತು ಅಧ್ಯಯನದ ಮಹತ್ವವನ್ನು ಪ್ರಸ್ತುತ ಸಂದರ್ಭದ ಅದರ ಅಗತ್ಯವನ್ನು ರಾಜನಿಕ ರುಲ್ಲಿ ಕೈಗೊಂಡುದ್ದರ ಬಗ್ಗೆ ಇಲ್ಲಿ ಪ್ರಸ್ಥಾಪಿಸಿದ್ದೇನೆ.

ಚೋಮನದುಡಿ ಮತ್ತು ಕುಸುಮಬಾಲೆಯಲ್ಲಿ ಜಾತಿ ವ್ಯವಸ್ಥೆಯ ಸ್ವರೂಪ. ಈ ಅಧ್ಯಾಯನದಲ್ಲಿ ಡು ವಿಭಿನ್ನ ವ್ಯಕ್ತಿತ್ವಗಳು ಅಂದರೆ ಬ್ರಾಹ್ಮಣಶಾಹಿ ನೆಲೆಯಿಂದ ಬಂದ ಕಾರಂತರು ಗ್ರಹಿಸುವ ಜಾತಿವ್ಯವಸ್ಥೆ ೂ ದಲಿತ ಸಮುದಾಯದಿಂದ ಬಂದ ದಲಿತ ನೋವು ಸಂವೇದನೆಯನ್ನು ಅನುಭವಿಸಿದ ದೇವನೂರರು ಡಿಸಿದ ಜಾತಿ ವ್ಯವಸ್ಥೆಯನ್ನು ಸ್ವಾತಂತ್ರ್ಯಪೂರ್ವದ ನವೋದಯದ ಸಂದರ್ಭದಲ್ಲಿಯೂ ಮತ್ತು ಸ್ವಾತಂತ್ರ್ಯೋತ್ತರ ಘಟ್ಟದ ದಲಿತ ಬಂಡಾಯದ ಸಂದರ್ಭದಲ್ಲಿಯೂ ಬೆಳೆದುಬಂದ ರೀತಿಯನ್ನು ವಿಶ್ಲೇಷಿಸುತ್ತಾ ಪ್ರಸ್ತುತವಾಗಿ ಎರಡು ಕೃತಿಗಳು ವ್ಯಕ್ತಪಡಿಸುಬಹುದಾದ ಆಶಯವನ್ನು ವರ್ಣಾಶ್ರಮ ಧರ್ಮದ ಜಾತಿ ಸ್ವರೂಪವನ್ನು ೕಡ್ಕರ್‌ವಾದದ, ಲೊಹಿಯಾವಾದದ, ಮಾರ್ಕ್ಸ್‌ವಾದದ ಹಿನ್ನಲೆಯಲ್ಲಿ ಗ್ರಹಿಸಿ ಜಾತಿ ಸ್ವರೂಪವನ್ನು ಸಿದ್ದೇನೆ.

ಅದ್ಯಾಯ – ಚೋಮನದುಡಿ ಮತ್ತು ಕುಸುಮಬಾಲೆಯಲ್ಲಿ ಜಮೀನ್ದಾರಿ ವ್ಯವಸ್ಥೆಯ ಸ್ವರೂಪ
ಗಳು ವರ್ಗಗಳಾಗಿ ಮಾರ್ಪಟ್ಟು ಆರ್ಥಿಕವಾಗಿ ಒಂದು ವರ್ಗ ಸಬಲವಾಗುತ್ತಾಸಾಗಿದ್ದು ಉನ್ನತ
ವನ್ನು ಪಡೆದು ಸಮಾಜದಲ್ಲಿ ಬಹುಮುಖ್ಯ ಹಾಗೂ ಪ್ರಥಮ ಸ್ಥಾನವನ್ನು ಅಲಂಕರಿಸಿದೆ. ಈ ದೇಶದ
ಲ ನಿವಾಸಿಗಳಾದ ದಲಿತರು ಆಸ್ತಿ, ವಿಧ್ಯೆ ಅಧಿಕಾರವನ್ನು ಪಡೆದುಕೊಂಡು ಗುಲಾಮರಾಗಿ ಜೀತದಾಳುಗಳಾಗಿ
ೀನ್ದಾರಿ ವ್ಯವಸ್ಥೆಯ ಅಧೀನದಲ್ಲಿ ಬದುಕಿದ ಚೋಮನ ಬದುಕನ್ನು ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ
ಿದಾನಿಕ ಹಕ್ಕುಗಳನ್ನು ಪಡೆಯಲು ಸಂಘಟನಾತ್ಮಕ ಹೋರಾಟದ ನೆಲೆಯಲ್ಲಿ ಶತಮಾನದಿಂದ
ಿಸಿಕೊಂಡ ಜಾತಿ ಪದ್ಧತಿಯ ವಿರೋಧ ಕ್ರಮವನ್ನು ಆದರೂ ವ್ಯವಸ್ಥೆಯಿಂದ ಹೊರತಾಗದೆ ಮತ್ತೊಂದು
ಯ ಶೋಷಣೆಗೆ ಒಳಗಾದ ಕ್ರಮವನ್ನು ಈ ಅಧ್ಯಾಯದಿಂದ ಕಂಡುಕೊಳ್ಳಲಾಗಿದೆ.

ಚೋಮನದುಡಿ ಮತ್ತು ಕುಸುಮಬಾಲೆಯ ನಿರೂಪಣಾ ತಂತ್ರ ಬ್ರಾಹ್ಮಣ ಸಮುದಾಯದ ಕಾರಂತರು
ು ಓಡಾಡುವ ಸಂದರ್ಭದಲ್ಲಿ ಕಂಡು ಸೂಕ್ಷ್ಮವಾಗಿ ಗ್ರಹಿಸಿದ್ದನ್ನು ಜಾತಿ ಮತ್ತು ಜಮೀನ್ದಾರಿ ವ್ಯವಸ್ಥೆಯ
ೀನದಲ್ಲಿ ಚೋಮನನ್ನು ಹಿಡಿದಿಟ್ಟು ಅವನ ಬೇಸಾಯಗಾರನಾಗುವ ಆಸೆಯನ್ನು ಹಿಂದೂ ಧರ್ಮದ
ೋಹಿತಶಾಹಿ ತಂತ್ರದಲ್ಲೇ ಉಳಿದು ಅವನ ಸ್ವಾವಲಂಬಾತ್ಮಕ ಬದುಕನ್ನು ಕಿತ್ತುಕೊಳ್ಳುವ ದುಡಿಯನ್ನು
ಯುವ ಮೂಲಕ ತನ್ನ ಕೋಪ ಆವೇಶ, ತಿರಸ್ಕಾರ, ಆಸೆ, ಪ್ರೀತಿ ಎಲ್ಲವನ್ನು ಹೊರಹಾಕುತ್ತಾ ಕೊನೆಗೆ
ತದ ಭಯದಿಂದ ಹಿಂದೂ ವ್ಯವಸ್ಥೆಯ ಕುತಂತ್ರಕ್ಕೆ ಬಲಿಯಾಗುವುದನ್ನು ಕಾರಂತರು ವ್ಯಕ್ತಪಡಿಸಿದ್ದಾರೆ.

ದಲಿತ ಪರಿಸರದಿಂದ ತನ್ನದೇ ಭಾಷೆ ಶೈಲಿಯಲ್ಲಿ ತನ್ನ ಜನರ ಅಂತಸತ್ವಗಳನ್ನು ಜಾನಪದೀಯ,
ನಿಕ ನೆಲೆಯಲ್ಲಿ ಜ್ಯೋತಮ್ಮಗಳ ಮೂಲಕ ದಲಿತ ಪುರಾಣವನ್ನೇಳಿಸುವ ತಂತ್ರಗಾರಿಕೆಯನ್ನು ಜಾತಿ
ರ್ಣವನ್ನು ಮೀರಿ ಮೇಲು ಕೀಳು ಭಾವವನ್ನು ದಾಟಿ ಭೌತಿಕವಾಗಿ ಒಂದಾಗುವ ವರ್ಣ ಸಂಕರದ
ಲಕ ನೈಸರ್ಗಿಕ ಬಯಕೆಯನ್ನು ಈಡೇರಿಸಿಕೊಳ್ಳುವುದರ ಮೂಲಕ ಹೊಸ ಬದಕನ್ನು ಕಟ್ಟಿಕೊಳ್ಳು
ವನ್ನು ತಂತ್ರಗಾರಿಕೆಯನ್ನಾಗಿ ಬಳಸಿರುವುದನ್ನು ವಸ್ತುನಿಷ್ಟ ನೆಲೆಯಲ್ಲಿ ಕಂಡುಕೊಳ್ಳಲಾಗಿದೆ. ಚೋಮನದುಡಿ
ತ್ತು ಕುಸುಮಬಾಲೆಯಲ್ಲಿ ಪಾತ್ರ ವಿಶ್ಲೇಷಣೆ ಎರಡು ವಿಭಿನ್ನ ವ್ಯಕ್ತಿಗಳು ವಿಭಿನ್ನ ರೀತಿಯಲ್ಲೇ ತಮ್ಮ
ಗಳಲ್ಲಿ ಪಾತ್ರ ನಿರ್ವಹಣೆಯನ್ನು ಮಾಡಿದ್ದಾರೆ. ಸಾಮಾಜಿಕ ವ್ಯವಸ್ಥೆಯ ಶ್ರೇಣಿಕರಣದಿಂದಾಗಿ ಮೇಲ್ವರ್ಗದ
ತ್ರಗಳಾದ ಸಂಕಪ್ಪಯ್ಯ, ಆತನ ತಾಯಿ ಮತ್ತು ವಸಾಹತು ಜಮೀನ್ದಾರಿಯ ಪ್ರತೀಕಗಳಾದ ಮಿಂಗೇಲ
ತ್ತು ಮನ್ವೇಲರು ದಲಿತ ಸಮುದಾಯದ ಚೋಮ ಮತ್ತು ಚೋಮನ ಕುಟುಂಬ ಬೆಳ್ಳಿ, ಗುರುವ,
ಯ ಕಾಳ, ನೀಲ ತುಳಿತಕ್ಕೆ ಒಳಗಾದುದಲ್ಲದೆ ಅಸ್ಪೃಶ್ಯರಾಗಿ ಹುಟ್ಟಿದ ಕಾರಣದಿಂದ ಆರ್ಥಿಕ ಮತ್ತು
ಗಿಕ ಶೋಷಣೆಗೆ ಒಳಗಾಗುತ್ತಾರೆ ಮತ್ತು ಸಾವನ್ನಪ್ಪುತ್ತಾರೆ.

ಸ್ವಾತಂತ್ರೋತ್ತರ ಸಂದರ್ಭದಲ್ಲಿ ಚರಿತ್ರೆಯ ದಿಕ್ಕನ್ನೇ ಬದಲಾಯಿಸುವಂತೆ ದೇವನೂರರ ಪಾತ್ರಗಳು
ಬರುತ್ತವೆ.

ಮಾತೃಪ್ರಧಾನ ನೆಲೆಯಲ್ಲಿ ಜ್ಯೋತಮ್ಮದೀರು ಎಲ್ಲರೂ ಒಂದಾಗಿ ಸತ್ಯದ ಅನಾವರನಗೊಳಿಸುತ್ತಾರೆ.
ರ್ಗದ ಕುಸುಮ, ಅಕ್ಕಮಾದೇವಮ್ಮ, ಮಲ್ಲಾಜಮ್ಮ, ರಾಜನ ಹೆಂಡತಿ ರಾಣಿಯ, ಶಾಸ್ತ್ರಿಗಳ ಮಗಳ
ಿಕ ಸಂಬಂಧಗಳು ವ್ಯವಸ್ಥೆಯನ್ನು ಮೀರಿ ದಲಿತ ಪುರುಷರಿಂದ ಲೈಂಗಿಕ ಬಯಕೆಯನ್ನು
ೇರಿಸಿಕೊಳ್ಳುತ್ತವೆ. ಅಲ್ಲಿನ ಅಮಾಸ ಗಾರಸಿದ್ಮಾವ, ಚನ್ನ, ನಾಗರಾಜರು ದಲಿತ ಸಂಘಟನೆಯ ನೆಲೆಯಲ್ಲಿ
ದಾಯಗಳು ಒಂದಾಗುವ ಕ್ರಮವನ್ನು ಕುಸುಮಬಾಲೆಯಲ್ಲಿನ ಪಾತ್ರಗಳು ವಿವರಿಸಿದ್ದನ್ನು ವಸ್ತುನಿಷ್ಟವಾಗಿ
ಿಸಿದ್ದೇನೆ. ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿರುವ ಜಾತಿ ವ್ಯವಸ್ಥೆಯು ಕಾಲಗತಿಯಲ್ಲಿ
ಲಾವಣೆಯಾಗದೇ ತನ್ನ ಮೂಲ ಸ್ವರೂಪವನ್ನು ಉಳಿಸಿಕೊಂಡಿದ್ದು ಆಯಾಯ ಕಾಲದಲ್ಲಿ ರೂಪಾಂತರ
ಂದಿ ಇಂದಿಗೂ ಉಳಿದುಕೊಂಡು ಜಾತ್ಯಾತೀತ ಪರಿಕಲ್ಪನೆಗೆ ವಿಮುಖವಾಗಿರುವುದನ್ನೇ ಸಮಕಾಲೀನ
ಸ್ವರೂಪದ ಬೆಳವಣಿಗೆಯನ್ನು ಅದರ ವಿಸ್ತಾರವನ್ನು ಅರಿತು ಮುಂದೆ ಇದಕ್ಕೆ ಕಂಡುಕೊಳ್ಳಬೇಕಾದ
ಹಾರವನ್ನು ನನ್ನ ಜ್ಞಾನಮಿತಿಯ ಗ್ರಹಿಕೆಯಲ್ಲಿ ಈ ಎರಡೂ ಕಾದಂಬರಿಗಳಲ್ಲಿನ ದಲಿತ ಸಂವೇದನೆಯ
ಪವನ್ನು ರಾಚನಿಕ ವಿಮರ್ಶೆಯ ನೆಲೆಯಲ್ಲಿ ಅಧ್ಯಯನ ಮಾಡಿದ್ದು ಸಂಶೋಧನೆಯ ಒಟ್ಟಾರೆ
ತಗಳನ್ನು ಉಪಸಂಹಾರದಲ್ಲಿ ವಿವರಿಸಿದ್ದೇನೆ.

## ಆಕರ ಗ್ರಂಥಗಳು :

ಚೋಮನದುಡಿ – ಡಾ|| ಕೆ. ಶಿವರಾಮ ಕಾರಂತ – ಪ್ರಕಾಶಕರು ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು – 2010

ಶಿವರಾಮ ಕಾರಂತ ಎರಡು ಅಧ್ಯಯನ – ಟಿ.ಪಿ. ಅಶೋಕ – ಅಕ್ಷರ ಪ್ರಕಾಶನ – 1992

ಕುಸುಮ ಬಾಲೆ – ದೇವನೂರು ಮಹಾದೇವ – ಅಭಿನವ ಪ್ರಕಾಶನ, ಬೆಂಗಳೂರು– 1988

ಒಡಲಾಳ – ದೇವನೂರು ಮಹಾದೇವ – ಅಭಿನವ ಪ್ರಕಾಶನ – 1979

ದ್ಯಾವನೂರು – ದೇವನೂರು ಮಹಾದೇವ – ಅಭಿನವ ಪ್ರಕಾಶನ, – 1973.

ದೇವನೂರು ಮಹಾದೇವರ ಸಾಹಿತ್ಯದ ಒಳನೋಟ – ಸಿ.ಪಿ. ಸಿದ್ಧಾಶ್ರಮ – ವಿಜಯಲಕ್ಷ್ಮಿ ಪ್ರಕಾಶನ ಮೈಸೂರು–2007

ಯಾರ ಜಪ್ತಿಗೂ ಸಿಗದ ನವಿಲುಗಳು – ಪಿ. ಚಂದ್ರಿಕಾ – ಅಭಿನವ ಪ್ರಕಾಶನ – 2000

ದೇವನೂರು ಮಹಾದೇವರ ಕಥೆಗಳು, ಕಾದಂಬರಿಗಳು – ಉದಯ ಕುಮಾರ್ ಹಬ್ಬು – ಮಾನಸ ಬುಕ್‌ಹೌಸ್, ಮೈಸೂರು – 2012

ಮೂಕಜ್ಜಿಯ ಕನಸುಗಳು – ಕೆ. ಶಿವರಾಮ ಕಾರಂತ – ಸ್ವಪ್ನ ಬುಕ್‌ಹೌಸ್, ಮರು ಮುದ್ರಣ – 2005.

ಮರಳಿ ಮಣ್ಣಿಗೆ– ಕೆ. ಶಿವರಾಮಕಾರಂತ – ಎಸ್.ಬಿ.ಎಸ್. ಪಬ್ಲಿಕೇಷನ್ ಡಿಸ್ಟ್ರಿಬೂಟರ್ಸ್ – ಮರು ಮುದ್ರಣ –2005

ದಲಿತ ಕಥನ – ಸಾ. ಮೊಗಳ್ಳಿ ಗಣೇಶ್ ಕನ್ನಡ ವಿ.ವಿ. ಪ್ರಸಾರಾಂಗ – ಹಂಪಿ–2006

ಎದೆಗೆ ಬಿದ್ದ ಅಕ್ಷರ – ದೇವನೂರು ಮಹಾದೇವ – ಅಭಿನವ ಪ್ರಕಾಶನ – 2012

ದಲಿತರು ಮತ್ತು ಜಾಗತೀಕರಣ, ಮೊಗಳ್ಳಿ ಗಣೇಶ್
ಹಂಪಿ ಕನ್ನಡ ವಿ.ವಿ. ಪ್ರಸಾರಾಂಗ - 1999
ದಲಿತ ಅಧ್ಯಾಯನ - ಸಂ. ಡಾ.ಟಿ.ಆರ್. ಚಂದ್ರಶೇಖರ್
- ಹಂಪಿ ಕನ್ನಡ ವಿ.ವಿ. ಪ್ರಸಾರಾಂಗ - 2005
ವರ್ಣದಿಂದ ವರ್ಗದ ಕಡೆಗೆ - ಆರ್.ವಿ. ಭಂಡಾರಿ
- ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು-2003
ಕಾರಂತರ ಚಿಂತನ - ಸಂ.ನಾಗ ಐತಾಳ
- ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ - 2000
ಕತ್ತಿಯಂಚಿನ ದಾರಿ - ರಹಮತ್ ತರೀಕೆರೆ
- ಅಭಿನವ ಪ್ರಕಾಶನ, ವಿಜಯನಗರ, ಬೆಂಗಳೂರು - 2006.
ಸಾಹಿತ್ಯ ಸಂಬಂಧ - ಟಿ.ಪಿ. ಅಶೋಕ,
ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ - 2008
ಅಮೂರ್ತತೆ ಮತ್ತು ಪರಿಸರ - ರಾಜೇಂದ್ರ ಚನ್ನಿ
- ಅಭಿನವ ಪ್ರಕಾಶನ, ವಿಜಯನಗರ, ಬೆಂಗಳೂರು - 2003
ಕನ್ನಡ ಸಾಹಿತ್ಯ ಕಾದಂಬರಿ - ಜಿ.ಎಸ್. ಅಮೂರ
ಶ್ರೀಹರಿ ಪ್ರಕಾಶನ, ಧಾರವಾಡ - 1994
ಸಾಹಿತ್ಯ ಸಂಪಾದನೆ ದೇವನೂರು ಮಹಾದೇವ - ಸಂ. ಪ್ರಧಾನ ಗುರುದತ್
-ನವಕರ್ನಾಟಕ ಪ್ರಕಾಶನ
ನೋಂದವರ ನೋವು - ಲೇ.ಸಂ. ಮೂಡ್ನಾ ಕೂಡು ಚಿನ್ನಸ್ವಾಮಿ
- ಲೋಹಿಯ ಪ್ರಕಾಶನ ಬಳ್ಳಾರಿ -2002
ಪರಂಪರೆ - ಪ್ರತಿರೋದ - ವಿಮರ್ಶೆ , ಡಾ. ಎನ್. ರಾಮಚಂದ್ರನ್
- ಪ್ರಕಾಶಕರು : ಸಂವಾದ ಮಲ್ಲಾಡಿಹಳ್ಳಿ, ಮಂಗಳೂರು- 2002
ಕನ್ನಡ ಕಾದಂಬರಿಗಳಲ್ಲಿ ಅಸ್ಪೃಶತೆಯ ಸಮಸ್ಯೆ - ಲಿಂಗರಾಜು,
- ಎಂ.ಫಿಲ್. ನಿಬಂಧ, ಬೆಂ.ವಿ.ವಿ. - 1990
ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ - ಡಾ॥ ಅರವಿಂದ ಮಾಲಗತ್ತಿ,
- ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು - 2003.
ಅಂಬೇಡ್ಕರ್ / ಮನುವಾದ , ಬಹುಜನ ಮಾಧ್ಯಮ ಕೇಂದ್ರ - 2007, ಮೈಸೂರು
ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣ ನೆಲೆಗಳು (ಸಂಶೋಧನೆ)
- ಕನ್ನಡ ಸಾಹಿತ್ಯ ಪರಿಷತ್- 2000, ಡಾ॥ ರೇವಣ್ಣ ಒಡೆಯರ್
ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ - ಮ.ನ.ಜ. - ಪ್ರಗತಿ ಪ್ರಕಾಶನ 2004
ಮದ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ - ಚಿದಾನಂದಮೂರ್ತಿ
- ಕನ್ನಡ ಸಾಹಿತ್ಯ ಪರಿಷತ್

